ಲಿಂಗವೇ ಶರಣ ಲಿಂಗವೇ ಶಿವ



# ಮೃತ್ಯುಂಜಯ ಅಪ್ಪಗಳು



ಡಾ. ಆರ್. ಸಿ. ಹಿರೇಮಠ

ಅಪ್ಪಗಳ ಜನ್ಮ ಶತಮಾನೋತ್ಸವ ಸಂಪುಟ

ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆ – ೧೦೦

---

# ಮೃತ್ಯುಂಜಯ ಅಪ್ಪಗಳು

ಡಾ॥ ಆರ್. ಸಿ. ಹಿರೇಮಠ

ವೀರಶೈವ ಅಧ್ಯಯನಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ – ಗದಗ

MRUTHYUNJAYA APPAGALU — a biography of Sri Sri Mruthyunjaya Swamiji, written in Kannada by Dr. R. C. Hiremath and Published by Veerashaiva Adhyayana Samsthe, Sri Jagadguru Thontadarya Samsthanamatha Dambala - Gadag 582 101, India-as the hundredth book in the series of the Great Personalities of Veerashaivism.

Crown 1/8 Pp. 80 + viii + 4 Art Plates Rs. 5-00

First Printing 1987 3000 Copies

---

ಗ್ರಂಥದಾನ

ಐಬಿಎಚ್ ಪ್ರಕಾಶನ

ಗಾಂಧಿನಗರ ಬೆಂಗಳೂರು 560 009

---


ಮೊದಲನೆಯ ಮುದ್ರಣ 1987 3000 ಪ್ರತಿಗಳು

**ಬೆಲೆ : ರೂ. 5-00**

ಮುದ್ರಣ : ಐಬಿಎಚ್ ಪ್ರಕಾಶನ ಪ್ರಿಂಟರಿ, ಬೆಂಗಳೂರು 560 054
ಇವರ ಪರವಾಗಿ ಎಚ್. ಎಸ್. ನಾರಾಯಣರಾವ್ ಮುದ್ರಿಸಿದ್ದು.

# ಆರಿಕೆ

ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ನಮ್ಮ ನಾಡಿನ ಒಂದು ಅಗ್ರಮಾನ್ಯ ವೀರಶೈವ ಧರ್ಮಪೀಠ. ಸುದೀರ್ಘ ಇತಿಹಾಸ, ಶ್ರೀಮಂತ ಪರಂಪರೆಗಳ ಈ ಸಂಸ್ಥಾನ ಕಾಲಧರ್ಮಕ್ಕನುಗುಣವಾಗಿ ಅನೇಕ ಕತ್ತಲೆ–ಬೆಳಕುಗಳನ್ನು ಕಂಡಿದೆ. ಆದರೆ ಹನ್ನೆರಡು ವರ್ಷಗಳ ಹಿಂದೆ ಪೂಜ್ಯ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು ಮಹಾಪೀಠವೇರುವಲ್ಲಿ ಈ ಸಂಸ್ಥಾನ ಕ್ರಮವಾಗಿ ಕತ್ತಲೆಯಿಂದ ಬೆಳಕಿನೆಡೆಗೆ ಬರುತ್ತಲಿದೆ ; ಈ ಬೆಳಕಿನಲ್ಲಿ ವೀರಶೈವ ಸಮಾಜ ಬೆಳಗತೊಡಗಿದೆ.

ಶ್ರೀಗಳವರ ವಯುಸ್ಸು ಕಿರಿದು, ಜ್ಞಾನ ಹಿರಿದು, ಭಕ್ತರ ಸೇವೆಯ ಹಂಬಲ ಇನ್ನೂ ಹಿರಿದು. ಇವರನ್ನು ನೋಡಿದಾಗಲೆಲ್ಲ ನನಗೆ ಶ್ರೀ ಚೆನ್ನಬಸವಣ್ಣನವರೇ ನೆನಪಾಗುತ್ತಾರೆ. ಜೀರ್ಣವಾಗಿದ್ದ ಕೇಂದ್ರ ಮಠವನ್ನು, ಶಾಖಾಮಠಗಳನ್ನು ಪುನರುಜ್ಜೀವನಗೊಳಿಸುತ್ತಲಿರುವ, ಒಡೆದು ಹೋಗಿದ್ದ ಸಮಾಜವನ್ನು ಪ್ರತಿ ಸೋಮವಾರದ ಶಿವಾನುಭವಗೋಷ್ಠಿಯ ಮೂಲಕ ಒಂದುಗೂಡಿಸುತ್ತಿರುವ, 'ಜಗದ್ಗುರು' ಎಂಬುದನ್ನೂ ಮರೆತು ಭಕ್ತರ ಮನೆಮನೆಗೆ ಕೃಪಾಕಿರಣವಾಗಿ ಸಂಚರಿಸುತ್ತಲಿರುವ, ವಿದ್ಯಾಸಂಸ್ಥೆ–ದಾಸೋಹ ಕೇಂದ್ರಗಳ ಮೂಲಕ ಬಡ ಮಕ್ಕಳನ್ನು ಮನದ ಮಗ್ಗುಲಲ್ಲಿಟ್ಟು ಜೋಪಾನ ಮಾಡುತ್ತಲಿರುವ ಕ್ರಿಯಾಕಲಾಪಗಳೆಲ್ಲ ಇವರ ಜಗದ್ಗುರುತ್ವಕ್ಕೆ ಭೂಷಣಪ್ರಾಯವೆನಿಸಿವೆ. ಹೀಗೆ 'ರಾಜಸತ್ತೆ'ಯ ಜಗದ್ಗುರುತ್ವದಿಂದ 'ಪ್ರಜಾಸತ್ತೆ'ಯ ಜಗದ್ಗುರುತ್ವಕ್ಕೆ ಹೊಂದಿಕೊಳ್ಳುತ್ತಲಿರುವುದು,ಶ್ರೀಗಳವರ ನವೀನದೃಷ್ಟಿಯ ದ್ಯೋತಕವಾಗಿದೆ.

ಈ ನವೀನತೆಗೆ ಉತ್ತಮ ನಿದರ್ಶನ, 'ವೀರಶೈವ ಅಧ್ಯಯನ ಸಂಸ್ಥೆ'ಯ ಉದಯ. ಹತ್ತು ವರ್ಷಗಳ ಅವಧಿಯಲ್ಲಿ ಈ ಸಂಸ್ಥೆ ನೂರು ವರ್ಷಗಳ ಕೆಲಸ ಮಾಡಿದೆ. ವೀರಶೈವ ಪ್ರಾಚೀನ ಸಾಹಿತ್ಯ, ನೂತನ ಸಾಹಿತ್ಯ, ಅನುವಾದ ಸಾಹಿತ್ಯ, ಅಪ್ರಕಟಿತ ಸಾಹಿತ್ಯ ಕೃತಿಗಳನ್ನು ಪ್ರಕಟಿಸುವ ಮೂಲಕ ಹೊಸ ಹೊಸ ದಿಗಂತಗಳನ್ನು ತೆರೆದ ಕೀರ್ತಿ ಈ ಸಂಸ್ಥೆಗೆ ಸಲ್ಲುತ್ತದೆ. ಇತ್ತೀಚೆ ಪ್ರಾರಂಭಿಸಿದ 'ವೀರಶೈವ ವಿಶ್ವಕೋಶ ಯೋಜನೆ' ಈ ಶತಮಾನದ ಒಂದು ಮಹಾಕಾರ್ಯ. ಇವೆಲ್ಲವುಗಳ ಮಗ್ಗುಲಲ್ಲಿಯೇ

ಬೆಳಕಿನ ಕಿರಣವಾಗಿ ಬೆಳೆದುಬಂದಿದೆ, 'ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ'.

ಹತ್ತು ವರ್ಷಗಳ ಅಲ್ಪಾವಧಿಯಲ್ಲಿ ಈ ಮಾಲೆಯ ಮೂಲಕ ನೂರು ಪುಸ್ತಕಗಳು ಪ್ರಕಟವಾದುದು ಒಂದು ಪವಾಡ. ಇತ್ತೀಚಿನ ನೂರು ವರ್ಷಗಳ ಅವಧಿಯಲ್ಲಿ ಆಗಿಹೋದ ವೀರಶೈವ ಪುಣ್ಯಪುರುಷರ ಚರಿತ್ರಕೋಶಗಳಿವು. ಶಿವಯೋಗಿಗಳು, ಸಾಹಿತಿಗಳು, ಸಮಾಜ ಕಾರ್ಯಕರ್ತರು, ಸ್ವಾತಂತ್ರ್ಯ ಹೋರಾಟಗಾರರು, ನ್ಯಾಯಮೂರ್ತಿಗಳು—ಹೀಗೆ ಎಲ್ಲ ಕ್ಷೇತ್ರಗಳ ಗಣ್ಯವ್ಯಕ್ತಿಗಳನ್ನು ಕುರಿತ ಈ ಮಾಲೆ ಈ ಶತಮಾನದ ಒಂದು ದೊಡ್ಡ ಸಾಧನೆ. "ಈ ಮಾಲಿಕೆಯಲ್ಲಿ ನೂರನೆಯ ಪುಸ್ತಕ ಯುಗಪುರುಷ ಶ್ರೀ ಮೃತ್ಯುಂಜಯ ಅಪ್ಪಗಳನ್ನು ಕುರಿತುದಾಗಿರಬೇಕು, ಅದನ್ನು ನಾನು ಬರೆಯಬೇಕು"— ಎಂಬುದು ಶ್ರೀಗಳವರ ಸಂಕಲ್ಪ, ಡಾ॥ ಎಂ. ಎಂ. ಕಲ್ಬುರ್ಗಿಯವರ ಅಪೇಕ್ಷೆ.

ಪೂಜ್ಯ ಶ್ರೀ ಮೃತ್ಯುಂಜಯ ಅಪ್ಪಗಳ ಜೀವನ ಎಷ್ಟು ಸರಳವೋ ಅಷ್ಟೇ ಸಂಕೀರ್ಣ. ಅವರು ಒಂದು ಮಹಾಕಾವ್ಯದ ವಸ್ತು. ಹೀಗಿರುವಾಗ ಅವರನ್ನು ಸಮಗ್ರವಾಗಿ ಚಿತ್ರಿಸುವುದು, ಅದೂ ನೂರು ಪುಟಗಳಲ್ಲಿ ಅಡಕಗೊಳಿಸುವುದು ಅಸಾಧ್ಯವೆಂಬ ಭಯ ನನ್ನದಾಗಿದ್ದಿತು. ಆದರೆ ಇದನ್ನು ಬರೆಯುವುದು ಅಷ್ಟೇ ಅನಿವಾರ್ಯವೆನಿಸಿದ್ದಿತು. ಹೀಗಾಗಿ "ವೀರನಾರಾಯಣನೆ ಕವಿ, ಲಿಪಿಕಾರ ಕುವರವ್ಯಾಸ" ಭಾವದಿಂದ ಬರವಣಿಗೆಯನ್ನು ಪ್ರಾರಂಭಿಸಿ, ಎರಡು ದಿನಗಳಲ್ಲಿ ಪೂರೈಸಿದ್ದೇನೆ. ಈ ನಲ್ವತ್ತೆಂಟು ಗಂಟೆಗಳಲ್ಲಿ ಡಾ॥ ಎಂ. ಎಂ. ಕಲ್ಬುರ್ಗಿ, ಡಾ॥ ವಿ. ಬಿ. ರಾಜೂರ ಮತ್ತು ಡಾ॥ ಬಿ. ಆರ್. ಹಿರೇಮಠ ಅವರು ನೀಡಿದ ಸಹಾಯ, ತೋರಿದ ಪ್ರೀತಿ ಅನನ್ಯವಾದುದು. ಇವರೆಲ್ಲರಿಗೆ ಕೃತಜ್ಞತೆಗಳು.

ಪೂಜ್ಯ ಜಗದ್ಗುರುಗಳ ಸಹನೆ ಅಸದೃಶವಾದುದು. ಕಳೆದ ಎರಡು ವರ್ಷಗಳಿಂದ ನನಗೆ ಆಗಾಗ ನೆನಪು ಮಾಡುತ್ತಲೇ ಬಂದು, ನನ್ನಿಂದ ಈ ಕೆಲಸ ಮಾಡಿಸಿದ ಅವರ ಅಂತಃಕರಣಕ್ಕೆ ಅನಂತ ಪ್ರಣಾಮಗಳು.

ಈ ಪುಸ್ತಕದ ಗ್ರಂಥದಾನವನ್ನು ರಾಷ್ಟ್ರಪ್ರಸಿದ್ಧಿಯ ಐಬಿಎಚ್ ಪ್ರಕಾಶನ ಸಂಸ್ಥೆ ಪೂರೈಸುತ್ತಿರುವುದಂತೂ "ಎತ್ತಣ ಮಾಮರ, ಎತ್ತಣ ಕೋಗಿಲೆ" ಎಂಬ ವಿಸ್ಮಯವನ್ನುಂಟುಮಾಡಿದೆ. ಇದು ಶ್ರೀ ಮೃತ್ಯುಂಜಯ ಪವಾಡವೆಂದೇ ಬಗೆದು, ಈ ಸಂಸ್ಥೆಯ ಶ್ರೀ ಜಿ. ಕೆ. ಅನಂತರಾಮ್ ಅವರಿಗೂ ಧನ್ಯವಾದಗಳನ್ನರ್ಪಿಸುತ್ತೇನೆ.

ಧಾರವಾಡ

**ಡಾ॥ ಆರ್. ಸಿ. ಹಿರೇಮಠ**

# ಮೊದಲ ಮಾತು

ಶಿವಶರಣರ ವಚನವಾಙ್ಮಯವನ್ನು ಮಥಿಸಿ ಸಾಹಿತ್ಯಸೌಂದರ್ಯವನ್ನು ಹರಿಹರ ರಾಘವಾಂಕಾದಿಗಳು ಪ್ರಕಟಿಸಿದರೆ, ತತ್ತ್ವಸೌಂದರ್ಯವನ್ನು ಸಾಕ್ಷಾತ್ಕಾರಗೊಳಿಸಿದವರು ಏಳುನೂರೊಂದು ವಿರಕ್ತರು. ಈ ವಿರಕ್ತ ಸಮೂಹದ ನಾಯಕವ್ಯಕ್ತಿಯಾಗಿ, ವೀರಶೈವ ಧರ್ಮಪರಂಪರೆಯ ಯುಗಪುರುಷನಾಗಿ ಮೆರೆದವ ತೋಂಟದ ಸಿದ್ಧಲಿಂಗಯತಿ. ಪ್ರಭುವಿನಂತೆ ನಿರಂಜನಮೂರ್ತಿಯಾಗಿ, ಬಸವಣ್ಣನಂತೆ ವೀರಶೈವ ಸಂಘಟಕನಾಗಿ, ಚೆನ್ನಬಸವಣ್ಣನಂತೆ ತತ್ವವೇತ್ತನಾಗಿ ಬೆಳಗಿದ ಹದಿನಾರನೆಯ ಶತಮಾನದ ಈ ಶಿವಯೋಗಿಸೂರ್ಯನ ಪೀಠ–ಪ್ರಪೀಠ ಪರಂಪರೆ, ಶಿಷ್ಯ–ಪ್ರಶಿಷ್ಯ ಪರಂಪರೆ ನಾಡಿನ ಒಳಗೆಲ್ಲ ತುಂಬಿದೆ, ಹೊರಗೆಲ್ಲ ತುಳುಕಿದೆ. ಅಂದಿನಿಂದಲೂ ಕನ್ನಡಿಗರ, ವಿಶೇಷವಾಗಿ ವೀರಶೈವರ ಬದುಕನ್ನು ತಿದ್ದಿ, ಭಾವನೆಯನ್ನು ತೀಡಿ, 'ಅಂಗವೇ ಶರಣ, ಲಿಂಗವೇ ಶಿವ' ಎಂಬ ಮಂತ್ರವನ್ನು ಘೋಷಿಸುತ್ತ, ಶಿಷ್ಯಕೋಟಿಯನ್ನು ಪೋಷಿಸುತ್ತ ಬಂದ ಘನತೆ ಈ 'ತೋಂಟದಾರ್ಯ ಪೀಠಪರಂಪರೆ'ಗೆ ಸಲ್ಲುತ್ತದೆ.

'ಶಿಷ್ಯರ ಸೇವೆಯೇ ಶಿವಪೂಜೆ' ಎಂಬ ಮಹಾಗುರು ತೋಂಟದಾರ್ಯನ ಸಂದೇಶದಂತೆ ನಡೆಯುವುದು ತನ್ನ ಪರಮ ಕರ್ತವ್ಯವೆಂದು ಡಂಬಳ–ಗದುಗಿನ 'ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ' ನಂಬಿದೆ. ಈ ನಂಬಿಕೆಯ ಫಲವಾಗಿ 1975ರಲ್ಲಿ ಸ್ಥಾಪಿತವಾದ 'ವೀರಶೈವ ಅಧ್ಯಯನ ಸಂಸ್ಥೆ'ಯ ಅಂಗವಾಗಿ ಪ್ರಾರಂಭವಾದ, 'ವೀರಶೈವ ಪುರಾತನ, ನೂತನ ಹಾಗೂ ಅನುವಾದ ಸಾಹಿತ್ಯ ರತ್ನಮಾಲೆ'ಗಳ ಜೊತೆ 'ವೀರಶೈವ ಪುಣ್ಯಪುರುಷ ಸಾಹಿತ್ಯ ರತ್ನಮಾಲೆ'ಯ ಉದಯವಾಗಿದೆ.

ಸಮಾಜದಲ್ಲಿ ಘಟಿಸಿದ ಸತ್ಕಾರ್ಯಗಳ 'ದಾಖಲೆ', ಸಮಾಜವನ್ನುದ್ಧರಿಸಿದ ಪುಣ್ಯಪುರುಷರ ಚರಿತ್ರೆಗಳು ಮುಂದಿನ ಪೀಳಿಗೆಗೆ ದಾರಿದೀಪವೂ ಹೌದು, ತೋರು ಬೆರಳೂ ಹೌದು. ಕಾರಣ ಇತ್ತೀಚಿನ ದಿನಗಳಲ್ಲಿ ಸಮಾಜವನ್ನು ಕಟ್ಟಿ ಬೆಳೆಸಿದ, ಸಮಾಜಕ್ಕಾಗಿ ದುಡಿದ ಮಹಾತ್ಮರ ಚರಿತ್ರೆಗಳನ್ನು ಬರೆದು ಪ್ರಕಟಿಸಬೇಕೆಂಬ ಉದ್ದೇಶದಿಂದ ಈ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. 19–20ನೆಯ ಶತಮಾನಗಳಲ್ಲಿ ಬಾಳಿದ ನೂರಾರು ಜನ ವೀರಶೈವ ಪುಣ್ಯಪುರುಷರಲ್ಲಿ ಪ್ರತಿತಿಂಗಳೂ

ಒಬ್ಬರನ್ನು ಕುರಿತು ಉಪನ್ಯಾಸವನ್ನೇರ್ಪಡಿಸುವುದು, ಏರ್ಪಡಿಸಿದ ಉಪನ್ಯಾಸವನ್ನು ಪ್ರಕಟಿಸಿ ಸುಲಭ ಬೆಲೆಯಲ್ಲಿ ವಿತರಣೆಗೊಳಿಸುವುದು ಈ ಮಾಲಿಕೆಯ ಸಂಕಲ್ಪವಾಗಿದೆ. ಈ ಮಾಲಿಕೆಯಲ್ಲಿ ನೂರನೆಯ ಕೃತಿ 'ಮೃತ್ಯುಂಜಯ ಅಪ್ಪಗಳು'.

'ಮೃತ್ಯುಂಜಯ' ಎಂದಾಕ್ಷಣ ಶಿವನನ್ನು ಬಿಟ್ಟರೆ ನಮಗೆ ತಟ್ಟನೆ ನೆನಪಾಗುವವರು ಮೃತ್ಯುಂಜಯ ಅಪ್ಪಗಳು. ಇವರ ಅವತಾರದಿಂದಾಗಿ ಈ ಹೆಸರು ಮರ್ತ್ಯದಲ್ಲಿ ಮನೆಮಾತಾಯಿತು ; ಮನಕ್ಕೆ ಮಂತ್ರವಾಯಿತು ; ವ್ಯಕ್ತಿ–ವೃತ್ತಿಗಳಿಗೆ, ಮನೆ–ಮಳಿಗೆಗಳಿಗೆ, ಬೀದಿ–ಬಡಾವಣೆಗಳಿಗೆ ನಾಮವಾಗಿ ಶೋಭಿಸಿತು. ಹೀಗೆ, 'ಎತ್ತೆತ್ತ ನೋಡಿದಡತ್ತತ್ತ ನೀನೇ ದೇವಾ' ಎಂಬಂತೆ ಸಮಾಜದ ತುಂಬ ಮೃತ್ಯುಂಜಯಮಯವಾಗಿ ಬೆಳಗಿದವರು, ಮೃತ್ಯುಂಜಯ ಅಪ್ಪಗಳು. ಆದುದರಿಂದ ಜನ ಅವರನ್ನು 'ಶತಮಾನದ ಸೂರ್ಯ'ನೆಂದೇ ನೆನೆಯುತ್ತಾರೆ. 'ನಿಮ್ಮ ನೆನೆದಾಗಲೇ ಉದಯ, ಮರೆದಾಗಲೇ ಅಸ್ತಮಾನ'ವೆಂದು ಭಾವಿಸುತ್ತಾರೆ.

'ವೀರಶೈವ ಮಠಾಧೀಶರು ಹೇಗಿರಬೇಕು' ಎಂಬುದಕ್ಕೆ ತಾವು ನಿದರ್ಶನವಾಗಿ ನಿಂತು, 'ವೀರಶೈವ ಮಠಗಳು ಹೇಗಿರಬೇಕು' ಎಂಬುದಕ್ಕೆ ತಮ್ಮ ಮಠವನ್ನು ನಿದರ್ಶನವನ್ನಾಗಿಸಿದವರು, ಅಪ್ಪಗಳು. ಈ ನಿದರ್ಶನದ ಬೆಳಕಿನಲ್ಲಿ ವೀರಶೈವ ಧರ್ಮ, ಸಾಹಿತ್ಯ, ಸಮಾಜಗಳಿಗೆ ಆವರಿಸಿದ್ದ ಅನೇಕ ಕತ್ತಲೆಗಳನ್ನು ಕಳೆಯುವುದರ ಮೂಲಕ ಅಪ್ಪಗಳು ವೀರಶೈವದ ಆತ್ಮಗೌರವವನ್ನು ಎತ್ತಿ ಹಿಡಿದರು, ವೀರಶೈವರಿಗೆ ತಮ್ಮತನದ ಅರಿವನ್ನು ಮೂಡಿಸಿದರು.

ಅಪ್ಪಗಳು ಅವತರಿಸಿದ ನೂರನೆಯ ವರ್ಷದಲ್ಲಿ ನಮ್ಮ ಮಾಲೆಯ ನೂರನೆಯ ಕೃತಿಯಾಗಿ ಇದನ್ನು ಹೊರತರುವ ಭಾಗ್ಯ ನಮ್ಮದಾಗಿದೆ. ಹೀಗಾಗಿ ಇದು ನಮ್ಮ ಸಂಸ್ಥೆಯ ಹೆಮ್ಮೆಯ ಮಾಲೆಯಾದ 'ವೀರಶೈವ ಪುಣ್ಯಪುರುಷ' ಗ್ರಂಥಶ್ರೇಣಿಯ ಶಿಖರಕೃತಿಯಾಗಿದೆ. ಈ 'ನೂರನೆಯ ಕೃತಿ'ಯೆಂಬುದು ಸಮಾಜದ ಪರವಾಗಿ ನಮ್ಮ ಮಠ ಅಪ್ಪಗಳಿಗೆ ಸಲ್ಲಿಸುತ್ತಿರುವ 'ನಮನಕೃತಿ'ಯೆಂದೇ ನಾವು ಭಾವಿಸುತ್ತೇವೆ. ಈ ಕಲಶಕೃತಿಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾಗಿದ್ದ ಡಾ॥ ಆರ್. ಸಿ. ಹಿರೇಮಠ ಅವರು ರಚಿಸಿರುವುದು ನಮಗೆ ಹೆಮ್ಮೆಯನ್ನುಂಟುಮಾಡಿದೆ. ಶ್ರೀ ಮೃತ್ಯುಂಜಯ ಅಪ್ಪಗಳನ್ನು,

ಶ್ರೀ ಮುರುಘಾಮಠವನ್ನು ತೀರ ಹತ್ತಿರದಿಂದ ಕಂಡವರಾದ ಇವರು ಈ ಚರಿತ್ರೆಯನ್ನು ಭಕ್ತಿ–ಗೌರವದಿಂದ ಕಂಡರಿಸಿದ್ದಾರೆ.

ಈ ಗ್ರಂಥಕ್ಕೆ ವಸ್ತುವಾದವರು ಯುಗಪುರುಷರಾದ ಮೃತ್ಯುಂಜಯ ಅಪ್ಪಗಳು. ಇದನ್ನು ಬರೆದವರು ಕುಲಪತಿಗಳಾಗಿದ್ದ ಡಾ॥ ಆರ್. ಸಿ. ಹಿರೇಮಠರು. ಇನ್ನೊಂದು ಹೆಮ್ಮೆಯೆಂದರೆ ಗ್ರಂಥದಾನವನ್ನು ಪೂರೈಸಿದವರು ರಾಷ್ಟ್ರಪ್ರಸಿದ್ಧಿಯ 'ಐಬಿಎಚ್ ಪ್ರಕಾಶನ ಸಂಸ್ಥೆ'ಯವರು. ಬೆಳೆದ ಪ್ರಕಾಶನ ಸಂಸ್ಥೆಯೊಂದು ಬೆಳೆಯುತ್ತಲಿರುವ ಪ್ರಕಾಶನ ಸಂಸ್ಥೆಗೆ ತೋರಬೇಕಾದ ಪ್ರೀತಿಗೆ ಮಾದರಿಯಿದು. ಇಂಥ ಅನನ್ಯ ಪ್ರೀತಿಯನ್ನು ತೋರಿಸಿದವರು ಬೆಂಗಳೂರಿನ ಐಬಿಎಚ್ ಪ್ರಕಾಶನ ಸಂಸ್ಥೆಯ ಶ್ರೀ ಜಿ. ಕೆ. ಅನಂತರಾಮ್ ಅವರು.

ಇವರೆಲ್ಲರಿಗೂ ಗೌರವಪೂರ್ವಕ ವಂದನೆಗಳನ್ನು ಸಲ್ಲಿಸುತ್ತ, ಈ ಕೃತಿ ಕಟ್ಟಡದ ರಚನೆಯಲ್ಲಿ ನೆರವಾದ ಎಲ್ಲರನ್ನೂ ನೆನೆಯುತ್ತೇವೆ.

ಪ್ರಕಾಶಕರು

**ವೀರಶೈವ ಅಧ್ಯಯನಸಂಸ್ಥೆ**

ಗ ದ ಗ — ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ



ಶ್ರೀ ಮಹಾಂತ ಸ್ವಾಮಿಗಳು



ಶ್ರೀ ಮುರುಘಾಮಠದ ಉಚಿತ ಪ್ರಸಾದನಿಲಯ

# ಮೃತ್ಯುಂಜಯ ಅಪ್ಪಗಳು

## ಯುಗಪುರುಷ

ಮಧ್ಯಾಹ್ನದ ಒಂದು ಗಂಟೆಯ ಸಮಯ. ಅಮೇರಿಕೆಯ ಭಾಷಾವಿಜ್ಞಾನಿ ಸ್ನೇಹಿತ ಗ್ಲೀಸನ್ ನನ್ನ ಮನೆಗೆ ಬಂದರು. "ಇಂದು ಎರಡು ಗಂಟೆಗೆ ನನ್ನ ಮಾತೃಭೂಮಿಗೆ ಮರಳುತ್ತಿದ್ದೇನೆ, ಅಷ್ಟರೊಳಗೆ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳನ್ನು ಕಾಣುವ ಅಪೇಕ್ಷೆ ನನ್ನದಾಗಿದೆ" ಎಂಬ ಆಸೆಯನ್ನು ವ್ಯಕ್ತಪಡಿಸಿದರು. ಕಾರುಹತ್ತಿ ಅವಸರದಿಂದ ಮುರುಘಾಮಠಕ್ಕೆ ಬಂದೆವು. ಅಲ್ಲಿಯೇ ಇದ್ದ ಒಬ್ಬರನ್ನು ವಿಚಾರಿಸಿದೆವು. "ಹತ್ತು ನಿಮಿಷದ ಹಿಂದೆ ಸ್ವಾಮಿಗಳು ಸ್ನಾನಕ್ಕೆ ದಯಮಾಡಿಸಿದ್ದಾರೆ" ಎಂಬ ಉತ್ತರ ಬಂದಿತು. "ಪೂಜೆ, ಪ್ರಸಾದ ಮುಗಿಯಬೇಕಾದರೆ ೧–೨ ಗಂಟೆ ಸಮಯ ಹಿಡಿಯಬಹುದು. ಕಾರಣ ಈಗ ದರ್ಶನವಾಗಲಿಕ್ಕಿಲ್ಲ" ಎಂದು ಭಾವಿಸಿ ನಾವು ಶಿವಯೋಗಿಗಳ ಗದ್ದುಗೆ ದರ್ಶನಕ್ಕೆ ನಡೆದೆವು. ಅಷ್ಟರಲ್ಲಿ ನಾವು ಬಂದುದನ್ನು ಧ್ವನಿಯ ಮೇಲಿಂದಲೇ ತಿಳಿದು, ಬೇಗನೇ ಸ್ನಾನ ಮುಗಿಸಿ, ನಿಂತಲ್ಲಿಯೇ ಇಷ್ಟ ಲಿಂಗದ ಮೇಲೆ ಶುದ್ಧೋದಕವನ್ನೆರೆದು ನಮಸ್ಕರಿಸಿ, ಸ್ವಾಮಿಗಳು ಥಟ್ಟನೆ ಹೊರಗೆ ಬಂದರು. ಡಾ॥ ಗ್ಲೀಸನ್ ಅವರನ್ನು ಆನಂದದಿಂದ ಬರಮಾಡಿಕೊಂಡರು. ಅಷ್ಟರಲ್ಲಿ ವರ್ಗಗಳನ್ನು ಮುಗಿಸಿಬಂದ ವಿದ್ಯಾರ್ಥಿಗಳು, ಅಮೇರಿಕೆಯ ಈ ಅತಿಥಿಯನ್ನು ಕಾಣಲು ಅಲ್ಲಿ ನೆರೆದರು. "ನಾಲ್ಕು ನಿಮಿಷ ನಮ್ಮ ವಿದ್ಯಾರ್ಥಿಗಳಿಗೆ ಉಪದೇಶದ ಮಾತುಗಳನ್ನು ಹೇಳಬೇಕು" ಎಂದು ಶ್ರೀಗಳು ತಿಳಿಸಿದರು. "ಇಲ್ಲಿಗೆ ಬಂದು ನಾನು ಭಗವಾನ್ ಬುದ್ಧದೇವನನ್ನು ಕಂಡಂತಾಯಿತು. ಒಬ್ಬ ಯುಗಪುರುಷನನ್ನು ನಾನಿಂದು ನೋಡಿ ಧನ್ಯನಾದೆ" ಎಂದು ಗ್ಲೀಸನ್ ಅವರು

ತಮ್ಮ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಹೇಳಿ, ಆಶೀರ್ವಾದ ಪಡೆದು ಮೊದಲೇ ಗೊತ್ತುಪಡಿಸಿದಂತೆ ಗಾಡಿಗೆ ಹೋದರು.

ಸಮಾಜಸೇವೆಯ ಕಾಯಕದಲ್ಲಿಯೇ ಲಿಂಗಪೂಜೆಯನ್ನು ಕಂಡವರು, ಮೃತ್ಯುಂಜಯಸ್ವಾಮಿಗಳು. ಹೀಗಾಗಿ ಲಿಂಗಪೂಜೆಯನ್ನು ಮೊಟಕುಗೊಳಿಸಿ, ಅತಿಥಿಗಳಿಗೋಸುಗ ಹೊರಗೆ ಬಂದು ತಮ್ಮ ಕರ್ತವ್ಯಪೂರೈಸಿದುದು ಅರ್ಥಪೂರ್ಣ ಘಟನೆ. "ಕಾಯಕದಲ್ಲಿ ನಿರತನಾದಡೆ ಲಿಂಗಪೂಜೆಯಾದರೂ ಮರೆಯಬೇಕು", "ಜಂಗಮವೆ ಹೊರಗಿರಲು ಲಿಂಗಾರ್ಚನೆ ಏವುದಯ್ಯ?" ಎಂಬ ಶರಣವಾಣಿ ಇಲ್ಲಿ ಸಾರ್ಥಕತೆಯನ್ನು ಪಡೆದಿತ್ತು. ಹೀಗೆ ಸಮಾಜ ಸೇವೆಯನ್ನೇ ಲಿಂಗಪೂಜೆಯೆಂದು ಭಾವಿಸಿದ ಮೃತ್ಯುಂಜಯಸ್ವಾಮಿಗಳು ಸಮಾಜಕ್ಕೆ ಹೊಸ ಜೀವಕಳೆಯಿತ್ತು, ಜೀವನದುದ್ದಕ್ಕೂ ಹೊಸ ಸಮಾಜವನ್ನು ನಿರ್ಮಿಸಲು ಪ್ರಯತ್ನಿಸಿದುದು ಈ ಶತಮಾನದ ಒಂದು ಅದ್ಭುತ ಸಾಧನೆ. ಹೊಸ ಯುಗವನ್ನು ತೆರೆದು ಯುಗಪುರುಷರಾದುದು ಈ ಶತಮಾನದ ಒಂದು ಅದ್ಭುತ ಚರಿತ್ರೆ.

## ಮಂಗಲೋದಯ

ಧಾರವಾಡದ ತರಬೇತಿಮಠ ಒಂದು ಸತ್‌ಸಂಪ್ರದಾಯದ ಗುರುಕುಲ. ಅಲ್ಲಿ ಚರಲಿಂಗಯ್ಯನವರೆಂಬ ಸ್ವಾಮಿಗಳು. ಇಂಗಳಹಳ್ಳಿಯ ಚೆನ್ನವೀರಮ್ಮನವರು ಇವರ ಧರ್ಮಪತ್ನಿ. ಸತಿಪತಿಗಳು ಲಿಂಗಪೂಜಾನಿಷ್ಠರೂ ಆಚಾರಸಂಪನ್ನರೂ ಆಗಿದ್ದರು. ಇವರ ಹೊಟ್ಟೆಯಲ್ಲಿ ಕಾಂತೆಪ್ಪನವರು ಜನಿಸಿದರು. ಚಿಕ್ಕಂದಿನಲ್ಲಿಯೇ ತಂದೆ ತಾಯಿಗಳನ್ನು ಕಳೆದುಕೊಂಡ ಅವರನ್ನು ಸೋದರಮಾವಂದಿರಾದ ಇಂಗಳಹಳ್ಳಿಯ ಸಂಗಯ್ಯನವರು ಜೋಪಾನಮಾಡಿದರು. ಕಾಂತೆಯ್ಯನವರು ಮುಲ್ಕೀ ಪರೀಕ್ಷೆ ಪಾಸಾದರು. ಶಾಲಾ ಶಿಕ್ಷಕರಾಗುವುದಕ್ಕಿಂತ ಸಮಾಜ ಸೇವಾಕಾರ್ಯದಲ್ಲಿ ನಿರತರಾಗುವುದು ಅವರ ಸ್ವಭಾವವಾಗಿದ್ದಿತು. ಸಂಸಾರದತ್ತ ಅವರ ಒಲವೇ ಇರಲಿಲ್ಲ. ಆದರೆ ಸೋದರಮಾವ ಸಂಗಯ್ಯನವರು ಅವರಿಗೆ ತಮ್ಮ ಮಗಳಾದ ಚೆನ್ನವೀರಮ್ಮನೊಡನೆ ಬಾಲ್ಯದಲ್ಲಿಯೇ ವಿವಾಹ ಮಾಡಿದರು. ಹೀಗಾಗಿ ಕಾಂತೆಯ್ಯನವರು

ಸಂಸಾರದ ಭಾರವನ್ನು ಪೂರೈಸಲು ತಿಂಗಳಿಗೆ ೬ರೂಪಾಯಿ ಸಂಬಳದ ಶಿಕ್ಷಕವೃತ್ತಿಯನ್ನು ಹಿಡಿದರು. ಇಂಗಳಹಳ್ಳಿಯ ಶ್ರೀ ತೋಂಟದಾರ್ಯಮಠದ ಕರಿಸಿದ್ಧೇಶ್ವರನ ಗದ್ದುಗೆಯ ಬಗ್ಗೆ ಈ ದಂಪತಿಗಳಿಗೆ ಅಪಾರ ಭಕ್ತಿ. ರೋಗಿಗಳಿಗೆ ಉಪಚಾರ ಮಾಡುವುದರಲ್ಲಿ ಅವರಿಗೆ ಹೆಚ್ಚಿನ ಆಸಕ್ತಿ. ಬಡಜನರ ಸೇವೆಯೆಂದರೆ ಅವರಿಗೆ ಪಂಚಪ್ರಾಣ. ಒಮ್ಮೆ ಬರಗಾಲ ಬಂದಾಗ ತಮ್ಮ ಹಗೆ ತೆಗೆದು ಬಡಬಗ್ಗರಿಗೆ ಜೋಳ ಹಂಚಿದರು. ಕರಿಸಿದ್ಧೇಶ್ವರನಲ್ಲಿ ಭಕ್ತಿ ಹುಣ್ಣಿಮೆಯ ಚಂದ್ರನಂತೆ ಬೆಳೆಯುತೊಡಗಿತು. ಒಂಟಿಗಾಲಿನಿಂದ ನಿಂತು ಕರಿಸಿದ್ಧೇಶ್ವರನ ಸನ್ನಿಧಿಯಲ್ಲಿ ಸುಶ್ರಾವ್ಯ ಕಂಠದಿಂದ ಭಕ್ತಿಗೀತೆಗಳನ್ನು ಹಾಡುತ್ತಿದ್ದರು. ಹಾಡುತ್ತ ಹಾಡುತ್ತ ಭಕ್ತಿಪರವಶರಾಗುತ್ತಿದ್ದ ಸನ್ನಿವೇಶಗಳು ಅನೇಕ. ಕಾಂತೆಯ್ಯನವರ ಮನೆತನಕ್ಕೆ ಬಡತನ ಹಾಸುಹೊಕ್ಕಾಗಿ ಅಂಟಿಕೊಂಡು ಬಂದಿದ್ದರೂ ಸದಾಚಾರ, ಸದುವಿನಯಗಳಿಗೆ ಕೊರತೆಯಿರಲಿಲ್ಲ. ದೈವದತ್ತವಾದ ಸಂಗೀತ ಮತ್ತು ಭಕ್ತಿ ಇವೆರಡೂ ಕಾಂತೆಯ್ಯನವರ ಉಸಿರು, ಪ್ರಾಣವಾಗಿದ್ದವು.

ಧರ್ಮಪತ್ನಿ ಚೆನ್ನವೀರಮ್ಮನವರ ನಡೆ ಚೆನ್ನ, ನುಡಿ ಚೆನ್ನ. ಗುಣ, ಶೀಲ ಸಮೃದ್ಧ. ಭಕ್ತಿಯಲ್ಲಿ ಮಿಗಿಲೆನಿಸಿ ಎಲ್ಲಂದದಿಂದಲೂ ಪತಿಗೆ ಅನುಕೂಲವತಿಯಾದ ಪತ್ನಿಯಾಗಿದ್ದರು. ನಿತ್ಯ ಕಾಯಕದಲ್ಲಿ ನಿರತರಾಗಿ ಶರಣರ ಒಕ್ಕುಮಿಕ್ಕ ಪ್ರಸಾದವನ್ನು ಸೇವಿಸುತ್ತಿದ್ದರು. ಕಾಂತೆಯ್ಯನವರ ಮುಗ್ಧಭಕ್ತಿ ಸುತ್ತುಮುತ್ತಲಿನ ಜನತೆಗೆಲ್ಲ ಸುಪರಿಚಿತವಾಗಿದ್ದಿತು. ಬಂದುದನ್ನು ಸ್ವೀಕರಿಸಿ, ಇದ್ದುದರಲ್ಲಿ ತೃಪ್ತಿಯನ್ನು ಪಡೆದು ಎಲ್ಲರಿಗೂ ಬೇಕಾದವರಾಗಿದ್ದರು. ಧಾರವಾಡ, ಇಂಗಳಹಳ್ಳಿ ಎರಡೂ ಊರ ಜನತೆಗೆ ಅಚ್ಚುಮೆಚ್ಚಿನವರಾಗಿದ್ದರು, ಗೌರವಾನ್ವಿತರಾಗಿದ್ದರು.

ಬಹಳ ದಿನಗಳ ವರೆಗೆ ಮಕ್ಕಳಾಗದಿದ್ದುದು ಸತಿಪತಿಗಳಿಗೆ ಒಂದು ಕೊರತೆಯೆನಿಸಿದ್ದಿತು. ಮಕ್ಕಳನ್ನು ಹೊತ್ತು ಹೆತ್ತು ಲಾಲನೆ ಪಾಲನೆ ಮಾಡಬೇಕೆಂಬ ಬಯಕೆ, ಕಾತರ ಚೆನ್ನವೀರಮ್ಮನವರಿಗೆ.

'ದಿನನಿತ್ಯ ನೀವು ಲಿಂಗಪೂಜೆ ಮಾಡುವಾಗ ಲಿಂಗಯ್ಯನಲ್ಲಿ ನಮ್ಮ ಸಂತಾನ ಬಯಕೆಯನ್ನು ಏಕೆ ಸಲ್ಲಿಸಬಾರದು ?' ಚೆನ್ನವೀರಮ್ಮನವರ ಪ್ರಾರ್ಥನೆ.

'ಹಾಗೆ ಮಾಡಿದರೆ ಭಕ್ತಿಗೆ ಕೂಲಿ ಬೇಡಿದಂತೆ ಆಗುವುದಿಲ್ಲವೆ ?' ಕಾಂತೆಯ್ಯನವರ ವಿಚಾರ. ದಿನಗಳು ಉರುಳಿದವು. ಒಂದು ದಿನ ಈ

ದಂಪತಿಗಳು ಧಾರವಾಡದಿಂದ ಇಂಗಳಹಳ್ಳಿಗೆ ಬರುವಾಗ ಊರನ್ನು ಮುಟ್ಟಿದೊಡನೆ ಗಾಳಿ ಮಳೆ, ಮಿಂಚು ಸಿಡಿಲುಗಳ ಆರ್ಭಟ ವಿಪರೀತವಾಯಿತು. ಇಬ್ಬರೂ ಪೂರ್ಣ ತೋಯಿಸಿಕೊಂಡರು. ಊರಲ್ಲಿಯೇ ಇದ್ದ ತೋಂಟದಾರ್ಯರ ಮಠವನ್ನು ಪ್ರವೇಶಿಸಿದರು. ತೊಯ್ದುದನ್ನು ಉಟ್ಟು, ತೊಯ್ದುದನ್ನು ಹೊದ್ದ ಸ್ಥಿತಿಯಲ್ಲಿದ್ದ ಕಾಂತೆಯ್ಯ ಚೆನ್ನವೀರಮ್ಮನವರು ಗದ್ದುಗೆಯ ಮುಂದೆ ನಿಂತು ತಮಗೆ ಮಗುವನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಿದರು. 'ಹುಟ್ಟಿದ ಮಗುವನ್ನು ನಿಮ್ಮ ಮಠಕ್ಕೆ ಬಿಡುವೆನು' –ಇದು ಚೆನ್ನವೀರಮ್ಮನವರ ಪ್ರಾರ್ಥನೆ. ಅದಕ್ಕೆ ಕಾಂತೆಯ್ಯನವರ ಸಮ್ಮತಿ. ಮತ್ತೆ ಕೆಲದಿನಗಳ ಮೇಲೆ ಕಾಂತೆಯ್ಯನವರು ತಮಗೆ ಮಗುವಾದರೆ ಗಣಾರಾಧನೆ ಮಾಡಿಸುವುದಾಗಿಯೂ ಹರಕೆ ಹೊತ್ತರು.

ಅಂದು ೧೮೮೮ನೆಯ ಇಸ್ವಿಯ ಏಪ್ರಿಲ್ ೯ನೆಯ ದಿನಾಂಕ. ಉಷಃಕಾಲದ ಹೊಂಗಿರಣಗಳು ಉಯ್ಯಾಲೆಯಾಡುವಂತೆ ತೂಗಿ ಅನುರಾಗದಿಂದ ತೊನೆಯುತ್ತಿದ್ದವು. ಹಕ್ಕಿಪಕ್ಕಿಗಳ ಜೋಗುಳದ ಇಂಪು ಸಹಸ್ರಮಡಿಯಾಗಿತ್ತು. ಸುತ್ತಲಿನ ತರುಮರಾದಿಗಳು ಹಸಿರು ಸೀರೆಯನ್ನುಟ್ಟು ಹೂಮುಡಿದು ನಿಂತ ಸುಮಂಗಲೆಯರಂತೆ ಸಂಭ್ರಮದ ಸಾಗರದಲ್ಲಿ ಮುಳುಗಿದ್ದವು. ಕೊಟ್ಟಿಗೆಯ ಹಸುಗಳು ತಂತಾನೆ ಹಾಲು ತೊರೆ ಬಿಡುತ್ತಿದ್ದವು. ಹೋರಿಗಳ ಕೊರಳಗೆಜ್ಜೆಗಳು ಉಲಿಪಿನಿಂದ ತಾಳಹಾಕುತ್ತಿದ್ದುವು. ದೇಗುಲದ ವಾದ್ಯಗಳು ಮೊಳಗಿ ಓಂಕಾರ ಧ್ವನಿಗೆಯ್ಯುತ್ತಿದ್ದವು. ಮಕ್ಕಳೆದ್ದು ಮಂಗಲಸ್ತೋತ್ರಪಠನದಲ್ಲಿ ನಿರತರಾಗಿದ್ದರು.

ಈ ಮಂಗಲ ಸಮಯದಲ್ಲಿ ಇಂಗಳಹಳ್ಳಿಯೊಳಗೆ ಮಂಗಲದ ಮಗುವೊಂದು ೯–೪–೧೮೮೮ರಂದು ಜನಿಸಿತು. ಊರಿಗೆ ಊರು, ಅಷ್ಟೇ ಏಕೆ ನಾಡಿಗೆ ನಾಡು ಅವ್ಯಕ್ತ ಆನಂದವನ್ನು ಅನುಭವಿಸಿತು. ಸೃಷ್ಟಿಯಲ್ಲಿ ಶಿವ ಅದೃಷ್ಟ ಕಾವ್ಯವೊಂದನ್ನು ಬರೆದಂತಾಗಿತ್ತು. ಕಾಂತೆಯ್ಯಸ್ವಾಮಿ ಚೆನ್ನವೀರಮ್ಮನವರ ಬಹುದಿನಗಳ ಬಯಕೆಯಬಳ್ಳಿ ಹಂದರವೇರಿದಂತಾಯಿತು. ಶ್ರೀಮಂತರಾಗಿದ್ದರೆ ಮಂಗಲೋತ್ಸವವನ್ನು ನೆರವೇರಿಸಬಹುದಿತ್ತು. ಆದರೆ ಬಡವರೇನು ಮಾಡಬಲ್ಲರು. ತೋಂಟದಾರ್ಯರ ಕೃಪೆಯಿಂದ ಜನಿಸಿದ ಮಗುವಿಗೆ ಅವರ ಆಶೀರ್ವಾದದ ಪ್ರಸಾದವನ್ನು ಮುಟ್ಟಿಸಿ ನೀಲಗಗನದಿಂದಿಳಿದ ಚಂದ್ರನಂತಹ ಮಗುವಿಗೆ ಮೃತ್ಯುಂಜಯನೆಂದು ನಾಮಕರಣ ಮಾಡಿದರು.

ಈತ ನಿಜವಾಗಿಯೂ ಮರಣವನ್ನು ಗೆಲ್ಲುವ ಮಹಾಂತನಾಗುವನು ಎಂದು ನಿಸರ್ಗ ಮೃತ್ಯುಂಜಯಗೀತ ಹಾಡಿದಂತಾಯಿತು.

## ಬೆಳೆಯುಸಿರಿ ಮೊಳಕೆಯಲ್ಲಿ

ಮೃತ್ಯುಂಜಯ ದಿನಕ್ಕೊಂದು ಚೆಂದಾಗಿ ಬೆಳೆಯತೊಡಗಿದ. ಆತ ಮಂಗಳಾರತಿಯ ಪದಗಳನ್ನು ಹಾಡಿದರೆ ಜನ ದಂಗು ಬಡಿದು ನಿಲ್ಲುತ್ತಿದ್ದರು. ಕಾಂತೆಯ್ಯಸ್ವಾಮಿಗಳ ಕಂಠಶ್ರೀ ಮಗುವಿಗೆ ದತ್ತು ಬಂದಿದೆ ಎಂದು ಜನ ಮೆಚ್ಚುಗೆಯ ಮಾತುಗಳನ್ನಾಡುತ್ತಿದ್ದರು. ತಂದೆ ಓದುಕಲಿಸಲು ಪ್ರಾರಂಭಿಸಿ 'ಓಂ ನಮಃಶಿವಾಯ'ಎಂದು ಬರೆದು ತೀಡ ಹೇಳಿದರು. ಬರೆಯುವದೆಂದರೆ ಇಲ್ಲದ ಬೇಸರ. ಶಾಲೆಗೆ ಹೋಗುವದಕ್ಕೂ ಇಷ್ಟವಿರಲಿಲ್ಲ. ಓದಿಗಿಂತ ಆಟ–ನೋಟಗಳಲ್ಲಿಯೇ ಬಾಲಕನ ಆಸಕ್ತಿ ಹೆಚ್ಚಾಗಿ ಕಾಣುತ್ತಿತ್ತು. ಹಾಡುತ್ತ ಓಡುತ್ತ ಹೋಗಿ ಮರವೇರಿ ಕುಳಿತುಬಿಡುತ್ತಿದ್ದ. 'ತುಂಟಮರಿ'ಯೆಂದು ಜನ ಪ್ರೀತಿಯಿಂದ ಕರೆಯತೊಡಗಿದರು. ಶಾಲೆಗೆ ಕ್ರಮವಾಗಿ ಹೋಗದಿದ್ದುದನ್ನು ಕಂಡು, ಮುಗ್ಧ ಕಾಂತೆಪ್ಪನವರಿಗೆ ಕೋಪ ಬಂದಿತು. ಬೆತ್ತದಿಂದ ಒಮ್ಮೆ ಚೆನ್ನಾಗಿ ಹೊಡೆದರು. ಮೃತ್ಯುಂಜಯನಿಗೆ ಆ ಹೊಡೆತಗಳನ್ನು ತಿಂದರೂ ಕರಿಸಿದ್ಧೇಶ್ವರನ ಗುಡಿಯ ಕಡೆಗೆಯೇ ಒಲವಿದ್ದಿತಲ್ಲದೆ ಶಾಲೆಯ ಗುಡಿಯ ಕಡೆಗಲ್ಲ. ಹೀಗಾಗಿ ಕಾಂತೆಪ್ಪನವರು ಆ ಮಠಕ್ಕೇನೇ ಮಗುವನ್ನು ಒಪ್ಪಿಸುವೆನೆಂದು ಅನ್ನತೊಡಗಿದರು. ಎಂಟನೆಯ ವರುಷಕ್ಕೆ ಮೃತ್ಯುಂಜಯನಿಗೆ ದೀಕ್ಷಾವಿಧಿಯಾಯಿತು. ಭಕ್ತರು ಮಗುವನ್ನು ಪಾದೋದಕಪ್ರಸಾದಗಳಿಗಾಗಿ ತಮ್ಮ ತಮ್ಮ ಮನೆಗಳಿಗೆ ಕರೆದುಕೊಂಡು ಹೋಗತೊಡಗಿದರು. ಮೃತ್ಯುಂಜಯ ಧಾರವಾಡಕ್ಕೆ ಬಂದಾಗ ಹೊಸಯಲ್ಲಾಪುರ ಓಣಿಯ ತರಬೇತಿ ಮಠದಲ್ಲಿ, ರೈಟರ್‌ಗಲ್ಲಿಯ ಹೂಲಿಮಠದಲ್ಲಿ ಸ್ವಲ್ಪ ಸಂಸ್ಕೃತವನ್ನೂ ಓದಿಕೊಂಡನು. ಇಂಗಳಹಳ್ಳಿಯಲ್ಲಿದ್ದಾಗ ಮಗು ಯಾವಾಗಲೂ ತೋಂಟದಾರ್ಯಮಠಕ್ಕೆ ಹೋಗಿ ಅಲ್ಲಿ ಹೆಚ್ಚು ಕಾಲ ಕಳೆಯುತ್ತಿದ್ದನು. ದಿನಗಳೆದಂತೆ ಮೃತ್ಯುಂಜಯ ಅಂತರ್‌ಮುಖಿಯಾಗತೊಡಗಿದ. ಈತನ ಭಾವಶುದ್ಧಿ, ವಿನಯ, ವೈರಾಗ್ಯ, ಸಂಗೀತ, ಶರಣರ ಅನುಭಾವಗೀತಪಠನ—ಇವುಗಳನ್ನು ಕಂಡು ಊರಜನ

ಆತನಿಗೆ ಮಾರುಹೋದರು. ಬೆಳೆಯುಸಿರಿ ಮೊಳಕೆಯಲ್ಲಿ ಎಂಬಂತೆ ಮೃತ್ಯುಂಜಯನ ಬಾಲ್ಯದಲ್ಲಿ ಭವ್ಯಜೀವನದ ವೈರಾಗ್ಯವೈಭವ ಧ್ವನಿತವಾಗುತ್ತಿತ್ತು.

'ಮೃತ್ಯುಂಜಯನೆಲ್ಲಿ ?' ಹೊರಗಿನಿಂದ ಮನೆಗೆ ಬಂದ ಕಾಂತೆಯ್ಯನವರು ಚೆನ್ನವೀರಮ್ಮನವರನ್ನು ಕೇಳುವ ಸಂಪ್ರದಾಯ.

'ಹೊರಗೆ ಹೋದವನಿನ್ನೂ ಬಂದಿಲ್ಲ' ತಾಯಿಯ ಉತ್ತರ. ಆಗ ಸಾವಧಾನವಾಗಿ ಕಾಂತೆಯ್ಯನವರು ನುಡಿಯುತ್ತಿದ್ದರು.

'ಮಗು ಬೆಳೆಯುತೊಡಗಿದೆ, ಕರಿಸಿದ್ಧೇಶ್ವರ ಗದ್ದುಗೆಯ ಮುಂದೆ ಬೇಡಿಕೊಂಡದ್ದು ನೆನಪಿದೆಯೇ ?'

'ಇದೆ. ನೆನಪಿರದೆ ಹೇಗೆ ? ತೊಯ್ದುದ್ದನ್ನು ಉಟ್ಟು, ತೊಯ್ದುದ್ದನ್ನು ತೊಟ್ಟು ಸಿಡಿಲು, ಮಿಂಚು, ಮಳೆ, ಗಾಳಿಗಳ ಸಾಕ್ಷಿಯಲ್ಲಿ ಬೇಡಿಕೊಂಡದ್ದು ನೆನಪಿದೆ.'

'ಮುಂದೇನು ?' ಪತಿಯ ಪ್ರಶ್ನೆ.

'ಆತನ ಬಾಲಲೀಲೆಗಳನ್ನು ನೋಡುವ ನನ್ನ ಕಣ್ಣಿಗೆ ಇನ್ನೂ ತೃಪ್ತಿಯಾಗಿಲ್ಲ ; ಇನ್ನೂ ಕೆಲದಿನ ತಡೆದರೆ ನಡೆಯಲಿಕ್ಕಿಲ್ಲವೆ ?' ಚೆನ್ನವೀರಮ್ಮನವರ ಮರುಪ್ರಶ್ನೆ.

'ದಿನಕಳೆದಂತೆ ಬಂಧ ಹೆಚ್ಚಾಗುವುದು.'

'ಆಗಲಿ, ಹರಕೆಗೆ ಪ್ರತಿಪರಕೆ ಇಲ್ಲವೆ ?'

'ದೇವರ ಕೂಡ ಸರಸವಾಡುವುದು ಸರಿಯಲ್ಲ.'

'ನೀವು ಹೊರಗೆ ಹೋಗಿ ಹೇಗಾದರೂ ಇತರ ವ್ಯವಹಾರಗಳಲ್ಲಿ ಮನೆತನದ ಸುಖ ದುಃಖಗಳನ್ನು ಮರೆಯಬಹುದು. ಆದರೆ ನಮಗೆ, ಸದಾ ಮನೆಯಲ್ಲಿರುವವರಿಗೆ ಮಕ್ಕಳ ಸುಖವೇ ಸುಖ. ಅವನ ಲಾಲನೆಪಾಲನೆಗಳನ್ನು ಮಾಡಿ ಆನಂದಪಡಬೇಕೆಂದು ಮೈ ಕೈ ಮನಗಳು ಆಶಿಸುತ್ತವೆ.'

'ಆಗಲಿ ನಿನ್ನಿಚ್ಛೆ.'

ಅಷ್ಟರಲ್ಲಿ ಬಾಲಕ ಮೃತ್ಯುಂಜಯ ಬಾಯಲ್ಲಿ ಶರಣರ ಹಾಡುಗಳನ್ನು ಗುನುಗುತ್ತಲೇ ಒಳಗೆ ಬಂದ.

'ಗಟ್ಟಿಯಾಗಿ ಹಾಡಪ್ಪಾ' ತಂದೆ ಹೇಳಿದ. ಮಗು ಮುಗ್ಧನಾಗಿ ಸುಮ್ಮನೆ ನಿಂತುಬಿಟ್ಟ.

'ಹಾಡು ಮಗು, ಲೀಲಾಸ್ವಾಮಿಗಳ ಒಂದು ಹಾಡನ್ನು.' ತಾಯಿ ಮಗುವನ್ನು ಮೈದಡವಿ ಪ್ರೀತಿಯಿಂದ ಕೇಳಿದಳು.

> 'ಜಯಮಂಗಲಂ ನಿತ್ಯ ಶುಭಮಂಗಲಂ
> ಜಯ ಜಯತು ಶಿಶು ಮಹಾಂತ ಲಿಂಗೇಶಗೆ
> .........
> ಪರಶಿವನ ಪಾರ್ವತಿಯ ತೊಡೆಯ ಮೇಲಾಡುತಲಿ
> ಹರುಷಾಬ್ಧಿ ಹೆಚ್ಚಿಸುವ ವರಪುತ್ರಗೆ

'ಪರಶಿವನ ಪಾರ್ವತಿಯ ತೊಡೆಯ ಮೇಲಾಡುವ ಮಗು ಈತನೇ' ಎಂದು ತಂದೆತಾಯಿಗಳು ಮಗುವನ್ನು ಬರಸೆಳೆದು ಅಪ್ಪಿಕೊಂಡರು. ತಾಯಿಯ ಕಣ್ಣಲ್ಲಿ ಆನಂದಬಾಷ್ಪಗಳುದುರುತ್ತಿದ್ದವು. ಬೆರಳಿನಿಂದ ಕಣ್ಣನ್ನು ಒರೆಸಿಕೊಂಡಳು ತಾಯಿ.

ಮಗುವಿನ ಸಂಗೀತ ಸಂಪತ್ತು ಬೆಳೆಯುವಂತೆ ತಂದೆ ನೋಡಿಕೊಳ್ಳತೊಡಗಿದರು. ನಿತ್ಯ ತಂದೆಯ ಸನ್ನಿಧಿಯಲ್ಲಿ ಸಂಗೀತಾಭ್ಯಾಸ ನಡೆಯಿತು.

'ಮೃತ್ಯುಂಜಯಾ, ಇಲ್ಲಿ ನೋಡು ಈ ಹಾಡನ್ನು ಹಾಡು.'

'ಯಾವ ಹಾಡು ?'

'ಕಾಡಲೇಕೆ ನರರುಗಳನು ಬೇಡಿ ಬಳಲಲೇಕೆ ಮನುವೆ', ತಂದೆ ಏಕದಾರಿ ಹಿಡಿದು ಈ ಹಾಡನ್ನು ಹಾಡಿ ತೋರಿಸಿದರು.

'ಕಾಡಲೇಕೆ ನರರುಗಳನು' ಎಂಬ ಇಡೀ ಹಾಡನ್ನು ತಂದೆಯವರಿಗಿಂತಲೂ ಸುಶ್ರಾವ್ಯವಾಗಿ, ಸುಂದರವಾಗಿ ಹಾಡಿ ತೋರಿಸಿದ ಮೃತ್ಯುಂಜಯ. ತಪ್ಪುತಡೆಗಳೇನೂ ಇಲ್ಲ, ರಾಗತಾಳಗಳ ಸುಸಂಬದ್ಧ ಯೋಜನೆ.

'ಈತನ ಕಂಠದಲ್ಲಿ ವಾಣಿ ಕುಳಿತು ತನ್ನ ವೀಣೆಯನ್ನು ನುಡಿಸುತ್ತಿರುವಂತಿದೆ.' ತಂದೆ ಮತ್ತೆ ಮತ್ತೆ ಹೀಗೆ ಹೇಳುತ್ತಿದ್ದರು.

ಮಗು ಮೃತ್ಯುಂಜಯ ಹುಟ್ಟಿದ ಮೇಲೆ ಅವರಿಗೆ ಬಡತನದ ಕಲ್ಪನೆ

ಆಗುತ್ತಿರಲಿಲ್ಲ. ಪ್ರಪಂಚದಲ್ಲಿ ಮಕ್ಕಳಿಗಿಂತಲೂ ಅಧಿಕವಾದುದು ಮತ್ತೊಂದಿಲ್ಲವೆಂಬುದು ನಿಜ. ಹೀಗೆ ಸಂತೋಷದಿಂದ ದಿನಗಳುರುಳ ತೊಡಗಿದವು.

## ಸಿದ್ಧಲಿಂಗಾರ್ಪಣಮಸ್ತು

ಒಂದು ದಿನ ಚೆನ್ನವೀರಮ್ಮ ಕರಿಸಿದ್ಧೇಶ್ವರನ ಮಠಕ್ಕೆ ಹೋಗಿ, ದೀಪ ಹಚ್ಚಿ ನಮಸ್ಕಾರ ಮಾಡಿ ಬಂದು, ಮನೆಯ ಕೆಲಸಗಳನ್ನೆಲ್ಲ ಪೂರೈಸಿ ರಾತ್ರಿ ಮಲಗಿಕೊಂಡಳು. ಕಣ್ಣು ಕುಕ್ಕಿಸುವ ಕಾವಿ ಬಟ್ಟೆ, ಹಣೆಯಲ್ಲಿ ತ್ರಿಪುಂಡ್ರ ಭಸ್ಮ, ಕೈಯಲ್ಲಿ ಬೆತ್ತ, ಕೊರಳಲ್ಲಿ ಲಿಂಗ, ಒಮ್ಮೆಲೇ ಜಂಗಮಮೂರ್ತಿ ಕನಸಿನಲ್ಲಿ ಚೆನ್ನವೀರಮ್ಮನವರ ಮುಂದೆ ಬಂದುನಿಂತರು.

'ಏನು ತಾಯೆ ಎಂದು ಕೊಡುವಿ ?'

'ಏನನ್ನು ಗುರುವೆ ?'

'ಈಗಲೇ ಮರೆತೆಯೇನಮ್ಮಾ.'

'ತಾವು...ತಾವು...'

'ಹೌದಮ್ಮ, ನಿನ್ನ ಆರಾಧ್ಯದೇವ ಸಿದ್ಧಲಿಂಗ.'

'ಕ್ಷಮಿಸಬೇಕು ಗುರುವೆ ? ನಿಮ್ಮ ದರ್ಶನದಿಂದ ಪುನೀತಳಾದೆ' ಎಂದು ಚೆನ್ನವೀರಮ್ಮ ಗುರುವಿನ ಪಾದಕಮಲಗಳಲ್ಲಿ ನಮಸ್ಕರಿಸಿದಳು.

'ನೆನಪಾಯಿತೇನಮ್ಮ ನಮ್ಮ ವಸ್ತು ನಮಗೆ ಕೊಡುವುದು ?' ಚೆನ್ನವೀರಮ್ಮನವರ ಕಣ್ಣೀರು ಸುರಿಯತೊಡಗಿತು.

'ಗುರುವೇ, ಅಂದು ಮಳೆಯಲ್ಲಿ ತೊಯ್ಸಿಕೊಂಡು ನಿಮ್ಮಲ್ಲಿ ಮಗುವನ್ನು ಪ್ರಾರ್ಥಿಸಿದೆ ! ಇಂದು ಕಣ್ಣೀರುಸ್ನಾನಮಾಡಿ ಮತ್ತೆ ನಿಮ್ಮಲ್ಲಿ ಪ್ರಾರ್ಥಿಸುವೆ.'

'ಏನೆಂದು ?'

'ಮಗುವನ್ನು ಬಿಡಬೇಕೆಂದು.'

'ನಾನೂ ಅದನ್ನೇ ಕೇಳುವೆನಮ್ಮ ; ಮಗುವನ್ನು ನಮಗೆ ಬಿಡಬೇಕೆಂದು.'

'ಅವನನ್ನು ಹೇಗೆ ಅಗಲಲಿ ಗುರುವೆ ?'

'ಎಷ್ಟು ದಿನ ಕೂಡಿ ಇರುವೆಯಮ್ಮಾ? ಒಮ್ಮೆ ಅಗಲಲೇ ಬೇಕಲ್ಲವೆ ?'

'ನಿಜ ಗುರುವೆ, ಈ ಮನೆತನದ ಕುಡಿ ಬೆಳೆಯಬೇಡವೇ ?'

'ಈ ನಾಡಿನಲ್ಲಿ ಲಕ್ಷ ಲಕ್ಷ ಕುಡಿಗಳು ಮುರಟಿ ಹೋಗುತ್ತಿವೆ. ನಮ್ಮ ಬಳ್ಳಿ ಬೆಳೆಯಲೆಂದೇ ನಮ್ಮ ಮಗುವನ್ನು ನಮಗೆ ಕೊಡಬೇಕೆಂದು ಕೇಳುತ್ತಿರುವೆ.'

'ಗುರುವೆ, ಮನೆ ಗೆದ್ದು ಮಾರು ಗೆದೆಯಬೇಡವೇ ?'

'ಯಾರ ಮನೆ ? ಶಿವನ ಮಹಾಮನೆ ಗೆದೆಯಬೇಕಾಗಿದೆಯಮ್ಮ' ಎಂದು ಚೆನ್ನವೀರಮ್ಮನವರ ಮಸ್ತಕದ ಮೇಲೆ ಹಸ್ತವನ್ನಿಟ್ಟರು.

'ಚೆನ್ನವೀರಮ್ಮನವರ ಕಣ್ಣಲ್ಲಿ ಆನಂದಬಾಷ್ಪ ಹರಿಯತೊಡಗಿತು. ಶರಣರ ಹಸ್ತಸ್ಪರ್ಶದಿಂದ ಚೆನ್ನವೀರಮ್ಮನವರ ಹೃದಯದಲ್ಲಿ ಅರುಣೋದಯವಾದಂತೆ ಹೊರಗೂ ಅರುಣೋದಯವಾಯಿತು. ಕರಿಸಿದ್ಧೇಶ್ವರನ ದೇಗುಲದ ಘಂಟಾನಾದವನ್ನು ಕೇಳಿ ಚೆನ್ನವೀರಮ್ಮ ಎದ್ದಳು. ಕಾಂತೆಯ್ಯನವರು ಆಗಲೇ ಎದ್ದಿದ್ದರು.

'ಇಂದು ಗದುಗಿಗೆ ಹೋಗೋಣ ?'

'ಯಾತಕ್ಕೆ.'

'ತೋಂಟದಾರ್ಯಮಠಕ್ಕೆ.'

'ಯಾರು ಯಾರು ಹೋಗಬೇಕು.'

'ನಾವು ಮೂವರೂ ಹೋಗೋಣ.'

'ಇದೇನಿದು ?'

'ಹೌದು ಕನಸಿನಲ್ಲಿ ತೋಂಟದ ಸಿದ್ಧಲಿಂಗಯತಿವರರು ದಯಮಾಡಿಸಿದ್ದರು.'

'ದಿಟವೇ ?'

'ದಿಟ ; ನನ್ನಾಣೆ, ನಿಮ್ಮ ಆಣೆ.'

'ಗುರುಗಳು ಏನೆಂದರು ? ಪ್ರಸನ್ನ ಮನಸ್ಕರಾಗಿದ್ದರೆ ?'

'ಸುಪ್ರಸನ್ನ ಮನಸ್ಕರಾಗಿದ್ದರು. ನನ್ನ ಮಸ್ತಕದ ಮೇಲೆ ತಮ್ಮ ಅಮೃತಹಸ್ತವನ್ನಿಟ್ಟರು. ಮನಸ್ಸಿನ ಅಳಲು ಕರಗಿ ಹೋಯಿತು. ನಿಮ್ಮ

ಸೊಮ್ಮು ನಿಮಗರ್ಪಿಸುವೆನೆಂದು ಮತ್ತೆ ವಚನವಿತ್ತೆ. ಇನ್ನು ತಡಮಾಡಲಾಗದು.'

ಸತಿಯ ವಚನವನ್ನು ಕೇಳಿದ ಕಾಂತೆಯ್ಯನವರಿಗೆ ಹೆಂಡತಿ ಒಪ್ಪಿದಳೆಂದು ಸಂತಸವಾದರೂ ಮಗನನ್ನು ಅಗಲಬೇಕಾಗುತ್ತದೆಯೆಂಬ ದುಗುಡ ಒಡನೆಯೇ ಆವರಿಸಿತು. ಕೊರಳ ಸೆರೆ ಬಿಗಿಯಿತು. ಕಣ್ಣೀರು ತುಂಬಿ ನಿಂತಿತು. ಚೆನ್ನವೀರಮ್ಮ ಗಂಡನ ದುಃಖವನ್ನು ಅರ್ಥಮಾಡಿಕೊಂಡಳು. 'ಸ್ವಾಮಿ ನಮ್ಮ ಅಳಲನ್ನು ಹತ್ತಿಟ್ಟು ಹರಕೆಯನ್ನು ಪೂರೈಸೋಣ. ಎಲ್ಲಿಯಾದರೂ ಮಗು ಬೆಳೆದು ದೊಡ್ಡವನಾಗಿ ಹೆಸರು ತಂದರೆ ಸಾಕಲ್ಲವೆ ?'

ಸತಿಪತಿಗಳಿಬ್ಬರೂ ಗಟ್ಟಿಮನಸ್ಸು ಮಾಡಿದರು. ಮೃತ್ಯುಂಜಯನನ್ನು ಗದುಗಿನ ತೋಂಟದಾರ್ಯಮಠಕ್ಕೆ ಒಪ್ಪಿಸಿಬಿಡಬೇಕೆಂದು ನಿರ್ಣಯಿಸಿದರು.

ಮರುದಿನ ನಸುಕಿನಲ್ಲಿಯೇ ಮೃತ್ಯುಂಜಯನನ್ನು ಚೆನ್ನವೀರಮ್ಮನವರು ಎಬ್ಬಿಸಿದರು. ಎಲ್ಲರೂ ಸ್ನಾನ ಪೂಜೆ ಮುಗಿಸಿದರು. ಊರಿಗೆ ಹೊರಡಲು ಮನೆಯ ಹೊರಗೆ ಬಂದರು. ಆಗಸದಲ್ಲಿ ಮೂಡಿದ ಬೆಳ್ಳಿಚಿಕ್ಕೆಯನ್ನೊಮ್ಮೆ ಮಗನ ಮುಖವನ್ನೊಮ್ಮೆ ನೋಡಿದಳು ಚೆನ್ನವೀರಮ್ಮ. ದಾರಿಸಾಗಿತು ; ಮುಂದೆ ಮುಂದೆ ಸಾಗಿತು. ಮಾತಿಲ್ಲ, ಕಥೆಯಿಲ್ಲ. ಕತ್ತಲೆ ಹರಿದು ಬೆಳಕು ಮೂಡಿತು. ಗದುಗಿನ ತೋಂಟದಾರ್ಯಮಠವನ್ನು ತಲುಪಿದರು.

ತೋಂಟದಾರ್ಯರ ಮಠವು ಜಗದ್ಗುರು ಪೀಠದ ವೈಭವಗಳನ್ನೆಲ್ಲ ಪಡೆದ ಒಂದು ಮಹಾ ಧರ್ಮಸಂಸ್ಥಾನ. ಆನೆ, ಕುದುರೆ, ಪಲ್ಲಕ್ಕಿ, ಮೇಣೆಗಳು ಸ್ವಾಮಿ ಸೇವೆಗೆ ಸಿದ್ಧವಾಗಿ ಮಠದ ಆವರಣ ಲವಲವಿಕೆಯಿಂದ ತುಂಬಿಹೋಗಿದ್ದಿತು. ಕೆಳದಿಯ ರಾಜರು ಅರ್ಪಿಸಿದ ಬೆಳ್ಳಿಬಂಗಾರದ ಆವುಗೆ, ಕಳಸಗಳು ಪ್ರತಿಸೂರ್ಯನಂತೆ ಕಾಂತಿಯನ್ನು ಚಿಮ್ಮುತ್ತಿದ್ದವು. ಲಕ್ಕುಂಡಿ ಜಗದ್ಗುರುಗಳ ಶ್ರೀಮದ್‌ಗಾಂಭೀರ್ಯ ಜಗದ್ಗುರುತ್ವಕ್ಕೆ ಘನತೆಯನ್ನು ತಂದಿತ್ತು. ಒಂದು ರಾಜಮನೆತನದ ವೈಭವ ಅಲ್ಲಿ ಕಾಲುಮುರಿದುಕೊಂಡು ಬಿದ್ದಂತಿದ್ದಿತು.

ಜಗದ್ಗುರುಗಳನ್ನು ಕಾಣುವುದು ಕಾಂತೆಯ್ಯ ದಂಪತಿಗಳಿಗೆ ಅಷ್ಟು ಸುಲಭಸಾಧ್ಯವೆಂಬಂತೆ ಕಂಡುಬರಲಿಲ್ಲ. ಭಕ್ತರು, ಅಧಿಕಾರಿಗಳು,

ಪರಿಚಯುದವರು, ಪರಿಚಾರಕರು ಎಷ್ಟೆಷ್ಟೋ ಜನ ಬಂದು ನೇರವಾಗಿ ಮುಂದೆ ನಡೆದು ಜಗದ್ಗುರುಗಳ ದರ್ಶನ ಮಾಡಿಕೊಂಡರು. ಅವರೊಡನೆ ಮಾತನಾಡಿ ದರ್ಶನ ಪೂರೈಸಿಕೊಂಡರು. ಮುಗ್ಧ ಕಾಂತೆಯ್ಯನವರು ಸಂಜೆಯಾಗುವ ವರೆಗೆ ತಡೆದರು. ಅಲ್ಲಿದ್ದ ಕಾರಭಾರಿಗಳಿಗೆ, ಕಾರಕೂನರಿಗೆ, ಸೇವಕರಿಗೆ ತಾವು ಬಂದ ವಿಷಯು ತಿಳಿಸಿದರು. ಆದರೆ ಆ ವಿಷಯು ಜಗದ್ಗುರುಗಳ ಕಿವಿಯು ವರೆಗೆ ಮುಟ್ಟಿತೋ ಇಲ್ಲವೋ. ಕೊನೆಗೆ ಕನಸಿನಲ್ಲಿ ಬಂದ ಸಿದ್ಧಲಿಂಗಯತಿವರನೇ ಎದ್ದು ಬಂದಂತೆ ಜಗದ್ಗುರುಗಳು ಸದರಿನ ಕಡೆಗೆ ನಡೆದುಬಂದರು. ಕಾಂತೆಯ್ಯನವರು, ಚೆನ್ನವೀರಮ್ಮನವರು, ಮಗು ಮೃತ್ಯುಂಜಯು ಮೂವರೂ ನಡೆದು ಜಗದ್ಗುರುಗಳಿಗೆ ನಮಸ್ಕರಿಸಿ ಕಾಣಿಕೆಯನ್ನಿತ್ತರು.

'ಏನು ಬಂದ ವಿಚಾರ ?'

'ಇಂಗಳಹಳ್ಳಿಯಿಂದ ದರ್ಶನಕ್ಕೆ ಬಂದೆವು' ಎಂದು ಹೇಳಿ ಮಗುವಿನ ಕಡೆಗೆ ಬೆರಳು ಮಾಡಿದರು, ಕಾಂತೆಯ್ಯನವರು. ಮಾತು ಹೊರಡಲಿಲ್ಲ. ಕೊರಳ ಶಿರ ಬಿಗಿದಿತ್ತು. ಸಾವರಸಿಕೊಳ್ಳತೊಡಗಿದರು.

'ಮಗುವಿನ ವಿಚಾರವೇನು ?'

'ಮಠಕ್ಕೆ ಬಿಡುವ ವಿಚಾರ.'

'ಇನ್ನೂ ಚಿಕ್ಕವ, ನಿಮ್ಮನ್ನು ಬಿಟ್ಟು ಇರಬಲ್ಲನೆ ?'

'ಆದರೂ ಮಠಕ್ಕೆ ಬಿಡಬೇಕೆಂದು ಗದ್ದುಗೆಯ ಅಪ್ಪಣೆಯಾಗಿದೆ.'

'ಆಗಲಿ, ಸಿದ್ಧಲಿಂಗನ ಇಚ್ಛೆ.'

ಮೃತ್ಯುಂಜಯ ಈಗ ವಟುವಾದ. ಕಾವಿಯು ಕಪನಿ, ಕೌಪೀನಗಳು ಮೃತ್ಯುಂಜಯುನ ಆಸ್ತಿಯಾದವು.

ಮಗನು ಎಲ್ಲರೊಡನೆ ಹೇಗೆ ಬೆರೆಯುುವನೆಂಬುದನ್ನು ದೂರದಿಂದ ನೋಡಬೇಕೆಂದು ಬಯಸಿ ತಂದೆತಾಯಿಗಳು ಒಂದು ದಿನ ಗದುಗಿನಲ್ಲಿ ಬೇರೆಡೆಗೆ ಉಳಿದುಕೊಂಡರು. ಮರುದಿನ ಅವರು ಮಠಕ್ಕೆ ಬಂದೊಡನೆ ಮಗು ತಾಯಿಯ ಕೈಯನ್ನು ಗಟ್ಟಿಯಾಗಿ ಹಿಡಿದ. ಚೆನ್ನವೀರಮ್ಮನವರು ಮಗುವನ್ನು ಬಿಗಿದಪ್ಪಿದರು. ಕಣ್ಣಲ್ಲಿ ನೀರು ಧಾರೆಯಾಗಿ ಸುರಿಯುತ್ತಿತ್ತು. ಕಾಂತೆಯ್ಯನವರಿಗೂ ದುಃಖವನ್ನು ತಡೆದುಕೊಳ್ಳುವದಾಗಲಿಲ್ಲ. ಇತರ ವಟುಗಳೂ, ಚರಮೂರ್ತಿಗಳೂ ಎಲ್ಲರೂ ಸಮಾಧಾನ ಹೇಳಿದರು.

ಮಗುವನ್ನು ಕೆಳಗಿಳಿಸಿ ಕರ್ತೃಗದ್ದುಗೆಗೆ ನಮಸ್ಕಾರ ಮಾಡ ಹೇಳಿದರು. ನಮಸ್ಕರಿಸಿ ಕಾಯಿಕರ್ಪೂರ ಮಾಡಿಸಿದರು. ಮಂಗಳಾರತಿಯಾಯಿತು. ಅಳುತ್ತ ನಿಂತಿದ್ದ ಮೃತ್ಯುಂಜಯುನಿಗೆ ತಂದೆ ಹಾಡು ಹೇಳಿದರು.

'ನೋಡಲಾಗದೇ ದೇವ, ನೋಡಲಾಗದೇ
ಕೊಡೆ ನಿನ್ನ ದಿಟ್ಟಿ ಮೂರು ನಾಡೆ ಲೇಸುಮಾಡುವನಕ
ನೋಡಲಾಗದೇ...'

ಈ ಹಾಡನ್ನು ಮೃತ್ಯುಂಜಯ ಸುಮಧುರ ಕಂಠದಲ್ಲಿ ಹಾಡಿದ. ನೆರೆದವರೆಲ್ಲ ಹರ್ಷಪುಲಕಿತರಾದರು. ತಂದೆತಾಯಿಗಳು ಮಗನ ಕಣ್ಣೀರೊರಸಿ,ಮೈದಡವಿ, ನಿಮ್ಮ ಸೊಮ್ಮು ನಿಮಗರ್ಪಿಸಿರುವೆವೆಂದು ಕರ್ತೃಗದ್ದುಗೆಗೆ ಒಪ್ಪಿಸಿ ಹೊರಟರು. ತಂದೆ ತಾಯಿಗಳಲ್ಲಿ ಪರವಶನಾಗಿದ್ದ ಮೃತ್ಯುಂಜಯ ಈಗ ಹರವಶನಾದ. ಮೃತ್ಯುಂಜಯ ವಟುವಿನ ವಾಸ್ತವ್ಯ ಗದುಗಿನ ತೋಂಟದಾರ್ಯಮಠದಲ್ಲಿ ಮುಂದುವರಿಯಿತು.

ದಂಪತಿಗಳು ಇಂಗಳಪಳ್ಳಿಗೆ ಬಂದರು. ಅಷ್ಟರಲ್ಲಿ ಮೃತ್ಯುಂಜಯ ತಮ್ಮ ಊರುಬಿಟ್ಟು ಹೋದುದು ಊರಿನ ಎಲ್ಲರಿಗೂ ತಿಳಿದಿತ್ತು. ತಂದೆತಾಯಿಗಳು ಬಂದೊಡನೆ ಊರ ಜನವೆಲ್ಲ ಮುಗಿಬಿದ್ದಂತೆ ಮುತ್ತಿದರು; ಮಕ್ಕಳು ಓಡಿ ಓಡಿ ಬಂದರು. ನಡೆದ ಘಟನೆಯನ್ನು ಕೇಳಿ ಅವರೆಲ್ಲ ಮರಮರ ಮರುಗಿದರು.

ಮೃತ್ಯುಂಜಯ ಭಾವಜೀವಿ. ಈ ಭಾವ ಅನುಭಾವವಾಗಿ ಅರಳಬೇಕಿತ್ತು. ಇದಕ್ಕೆ ವೈರಾಗ್ಯವೇ ಪರಮಸೋಪಾನ. ಶ್ರೀಮಠದಲ್ಲಿ ವೈರಾಗ್ಯ ಒಂದು ಕಡೆಗೆ, ವೈಭವ ಇನ್ನೊಂದು ಕಡೆಗೆ. ಪಾಠಶಾಲೆಯ ವಿದ್ಯಾಭ್ಯಾಸ, ಪೂಜೆ–ಪುರಸ್ಕಾರ, ಪುರಾಣ–ಪ್ರವಚನಗಳ ಪ್ರಭಾವ ಈ ಕಡೆಗೆ. ಛತ್ರ–ಚಾಮರ–ಆನೆ–ಕುದುರೆ–ಬೆಳ್ಳಿ–ಬಂಗಾರ–ವಾದ್ಯವೈಭವಗಳ ಪ್ರಭಾವ ಆ ಕಡೆಗೆ. ಈ ದ್ವಂದ್ವದಲ್ಲಿ ನಿಂತ ಮೃತ್ಯುಂಜಯುನಿಗೆ ಒಂದು ಬಗೆಯ ತೊಳಲಾಟ. ಆದರೂ ಪೂಜೆಗೆಂದು ಪತ್ರಿಪುಷ್ಪಗಳನ್ನೆತ್ತುವುದರಲ್ಲಿ, ಮಡಿಯ ನೀರನ್ನು ಜಗ್ಗುವುದರಲ್ಲಿ, ಮಡಿಯ ಬಟ್ಟೆಗಳನ್ನು ಹಿಂಡಿ ಹಾಕುವಲ್ಲಿ, ಕರ್ತೃಗದ್ದುಗೆಯ ಸೇವೆಯಲ್ಲಿ ಎಲ್ಲದರಲ್ಲಿ ಮೃತ್ಯುಂಜಯನೇ ಮೊದಲಿಗ. ಎತ್ತಿದ ಪುಷ್ಪಗಳನ್ನು, ಎರೆವ ನೀರನ್ನು, ಅರ್ಪಿಸುವ ನೈವೇದ್ಯವನ್ನು ಕೈಗಳು ನುಂಗುತ್ತಿವೆ ; ಲಿಂಗಕ್ಕೆ ಅವು

ಅರ್ಪಿತವಾಗುತ್ತಿಲ್ಲವೆಂಬ ತಳಮಳ. ಲಿಂಗಕ್ಕೆ ಅರ್ಪಿತವಾಗಬೇಕಾದರೆ ಸಹಜಭಕ್ತಿ, ದಾಸೋಹಂಭಾವ, ಮಾಟಕೂಡಿ ಶುದ್ಧಿ, ಸಿದ್ಧಿ ಇರಬೇಕಾಗುತ್ತದೆ. ಈ ಸಿದ್ಧಿಯತ್ತ ಮನಸ್ಸು ಹಂಬಲಿಸುತ್ತಿತ್ತು.

ಆನೆ, ಕುದುರೆಗಳನ್ನು ನೆರೆಯ ಹಳ್ಳಕ್ಕೆ ತೆಗೆದುಕೊಂಡು ಹೋಗಲು ಮಾವುತರು, ರಾವುತರು ಸಿದ್ಧರಾಗಿರಲು, ವಟುಗಳಿಗೆ ಅವುಗಳನ್ನು ಹಿಂಬಾಲಿಸಲು ಬಹಳ ಇಷ್ಟ.

'ಮೃತ್ಯುಂಜಯಾ ಆನೆ–ಕುದುರೆಗಳನ್ನು ಏರಿ ಹಳ್ಳಕ್ಕೆ ಹೋಗಲು ಬರುವೆಯಾ ?' ವಟುಗಳ ಪ್ರಶ್ನೆ.

'ಇಲ್ಲಿಯ ಗೋಶಾಲೆಗಳಲ್ಲಿ ಗೋಸೇವೆ ಮಾಡುವುದೇ ನನಗಿಷ್ಟ' ಮೃತ್ಯುಂಜಯನ ಉತ್ತರ.

'ಬಾ, ಬಾರಯ್ಯ ಹೋಗೋಣ, ಸೇವಕರು ಗೋಸೇವೆ ಮಾಡಲಿ, ನಮಗೇಕೆ ಆ ಕೆಲಸ ?' ಮಿಕ್ಕ ವಟುಗಳ ಅಭಿಮತ. ಸರಿ, ಎಲ್ಲರೂ ಹೊರಟರು.

'ಬಾ ಮೃತ್ಯುಂಜಯಾ, ಆನೆಯ ಮೇಲೆ ಕುಳಿತುಕೊಳ್ಳೋಣ.'

'ದೇವರು ನಡೆಯಲಿಕ್ಕೆ ಕಾಲುಗಳನ್ನು ಕೊಟ್ಟಿರುವನಲ್ಲವೆ ?' ಮೃತ್ಯುಂಜಯನ ಪ್ರಶ್ನೆ. ದಿನದಿನವೂ ಆನೆ ಕುದುರೆಗಳನ್ನೇರಲು ಅವರು ಆದರದಿಂದ ಮೃತ್ಯುಂಜಯನನ್ನು ಕರೆಯುವರು, ಒಂದು ದಿನವೂ ಮೃತ್ಯುಂಜಯ ಅವುಗಳನ್ನೇರಲಿಲ್ಲ. ಯಾವುದಕ್ಕೂ ಒಂದು ದೃಢಮನಸ್ಸು ಇದ್ದಿತು, ಮೃತ್ಯುಂಜಯನಿಗೆ.

ಒಮ್ಮೆ ಚೈತ್ರ ಶುದ್ಧ ದವನದ ಹುಣ್ಣಿಮೆಯಂದು ತೋಂಟದಾರ್ಯಮಠದ ರಥೋತ್ಸವವಿದ್ದಿತು. ಜಗದ್ಗುರುಗಳು ಸುವರ್ಣ ಪಾದುಕೆಗಳನ್ನು ಮೆಟ್ಟಿ ನಡೆದು ಬಂದು, ಸುವರ್ಣಕಲಶಗಳಿಂದ ಅಲಂಕೃತವಾದ ಪಲ್ಲಕ್ಕಿಯಲ್ಲಿ ಮೂರ್ತ ಮಾಡಿದರು. ಮಿಕ್ಕ ಹರಗುರುಚರಮೂರ್ತಿಗಳೂ ವಂದಿಮಾಗಧರೂ ಬಿರುದಾವಳಿಗಳನ್ನು ಉಗ್ಘಡಿಸುತ್ತ ನಡೆದರು. ಮಠದ ವಟುಗಳು ಅವುಗಳನ್ನು ಪುನರುಚ್ಚರಿಸುತ್ತಿದ್ದರು. ವಟು ಮೃತ್ಯುಂಜಯನ ವೈರಾಗ್ಯಭಾವವನ್ನೇ ಕೆಣಕುವಂತಿತ್ತು, ಈ ವೈಭವದ ದೃಶ್ಯ. ಒಂದು ಬಗೆಯ ಆತಂಕದಿಂದಲೇ ಮಲಗಿದ ಮೃತ್ಯುಂಜಯ ಬೆಳಗಿನ ಜಾವ ಎದ್ದ. ಬೆಳ್ಳಿ ಮೂಡಿತ್ತು. ಯಾರಿಗೂ ಹೇಳದೆ ಮಠಬಿಟ್ಟು ದೂರ ಹೋದ.

ಮಠದವರು ಅಲ್ಲಲ್ಲಿ ಹುಡುಕಿದರು. ಎಲ್ಲಿಯೂ ಆತನ ಸುಳಿವಿಲ್ಲ. ಕಾಂತೆಪ್ಪನವರಿಗೆ ಹೇಳಿ ಕಳಿಸಿದರು. ಗದುಗಿಗೆ ಬಂದು ಗದ್ದುಗೆಯ ಮುಂದೆ ನಿಂತು 'ಎಲ್ಲಿದ್ದರೇನಯ್ಯ ಲಿಂಗವೆ, ನೀ ಅಲ್ಲಿಯೇ ಪೊರೆಯಯ್ಯ ಲಿಂಗವೆ' ಎಂದು ಸುಶ್ರಾವ್ಯವಾಗಿ ಹಾಡಿ ಪರವಶರಾದರು. ಒಂಟಿಗಾಲಿನಿಂದ ಕುಣಿದು ಭಕ್ತಿಯನ್ನರ್ಪಿಸಿ ಇಂಗಳಹಳ್ಳಿಗೆ ಮರಳಿದರು. ಈಗ ತಮ್ಮ ದುಃಖವನ್ನು ತೋಡಿಕೊಳ್ಳಲು ಚೆನ್ನವೀರಮ್ಮನವರಿಲ್ಲ. ಅವರು ಹಿಂದೆ ಬಂದ ಪ್ಲೇಗಿಗೆ ಆಗಲೇ ತುತ್ತಾಗಿದ್ದರು. ನೀಲಕಂಠನಂತೆ ಆ ಅಳಲನ್ನು ಕೊರಳಲ್ಲಿಟ್ಟುಕೊಂಡು ಕಾಂತೆಪ್ಪನವರು ಮುಂದೆ ಸಾಗಿದರು.

## ಪರಿವ್ರಾಜಕ

ಬಾಲವಟು ಮೃತ್ಯುಂಜಯ ಸಂಚಾರ ಕೈಕೊಂಡ. ಹಸಿವಾದಡೆ ಭಿಕ್ಷೆ, ತೃಷೆಯಾದಡೆ ಕೆರೆಬಾವಿಹಳ್ಳ, ಶಯನಕ್ಕೆ ಹಾಳುದೇಗುಲ. ಹೀಗೆ ಸಂಚರಿಸುತ್ತ ಕೊಪ್ಪಳಕ್ಕೆ ಬಂದರು. ಅಲ್ಲಿ ಗವಿಮಠದ ಶ್ರೀಗಳ ದರ್ಶನ ಪಡೆದರು. ಒಂದೆರಡು ದಿನ ತಂಗಿದರು. ಮುಂದೆ ಪಂಪಾವಿರೂಪಾಕ್ಷ ಕೈಮಾಡಿ ಕರೆದಂತಾಯಿತು. ಹಂಪೆಗೆ ಬಂದರು. ತುಂಬಿ ಹರಿವ ತುಂಗಭದ್ರೆ ಮೃತ್ಯುಂಜಯನ ಮನಸ್ಸಿನ ಮೇಲೆ ಅದ್ಭುತವಾದ ಪರಿಣಾಮವನ್ನುಂಟುಮಾಡಿತು. ಪಂಪಾವಿರೂಪಾಕ್ಷನನ್ನು ಕಂಡು ಧನ್ಯರಾದರು. ಗುಡಿಗೋಪುರಗಳನ್ನು ಹಾಳು ದೇಗುಲಗಳನ್ನು ಸುತ್ತಾಡಿ ಸಂಚರಿಸಿದರೂ ಭಕ್ತಿ ಪರವಶತೆಯ ಬಾಲಕನಿಗೆ ದಣಿವಾಗಲಿಲ್ಲ. ಅಲ್ಲಿಂದ ಕಂಪ್ಲಿಗೆ ಬಂದರು. ಅಲ್ಲಿಂದ ಎಮ್ಮಿಗನೂರ ಜಡೆಯಸ್ವಾಮಿಗಳ ಸನ್ನಿಧಿಗೆ ಬಂದರು. ಭಕ್ತಿಯಿಂದ ತತ್ವಪದಗಳನ್ನು ಹೇಳತೊಡಗಿದರು. ಜಡೆಯ ತಾತನವರು ಬಹು ವಿರಳವಾಗಿ ಮಾತನಾಡುವವರು. ಮೃತ್ಯುಂಜಯನ ಭಕ್ತಿಗೆ ಮೆಚ್ಚಿ, ಮುಂದಕ್ಕೆ ಕರೆದು, ಮೈಮೇಲೆ ಕೈಯಾಡಿಸಿ, ಅಂತಃಕರಣಪೂರ್ವಕವಾಗಿ ಆಶೀರ್ವದಿಸಿದರು. ದೇವದರ್ಶನ, ಗುರುದರ್ಶನಗಳಿಂದ ಮೃತ್ಯುಂಜಯನ ಮನಸ್ಸು ವೈರಾಗ್ಯದಲ್ಲಿ ಗಟ್ಟಿಗೊಂಡರೂ ಮುಂದಿನ ಹಾದಿ ಸ್ಪಷ್ಟವಾಗಿರಲಿಲ್ಲ. ಹೀಗಾಗಿ ವಟು ಜಂಗಮವಾಗಿ ಸಂಚರಿಸಿದನಲ್ಲದೆ ಒಂದೆಡೆ ಸ್ಥಿರವಾಗಿ ನಿಲ್ಲಲಿಲ್ಲ. ನಿಲ್ಲುವಂತೆ ಮನಸ್ಸಾದರಲ್ಲವೆ ನಿಲ್ಲುವುದು ! ಸಂಚಾರ ಮುಂದುವರಿಯಿತು.

ಜಡೆಯತಾತನವರಿಂದ ಆಶೀರ್ವಾದ ಪಡೆದು ಸಕ್ಕರಿ ಕರಡೆಪ್ಪನವರಿದ್ದ ಬಳ್ಳಾರಿಗೆ ಬಂದರು. ಕರಡೆಪ್ಪನವರ ಪಾಠಶಾಲೆ ವಿದ್ವಾಂಸರ ಹಾಗೂ ವಟುಗಳ ದೊಡ್ಡ ಕೇಂದ್ರವಾಗಿತ್ತು. ಕರಡೆಪ್ಪನವರು ಭಕ್ತಿನಿಷ್ಠರು, ಗುರುಲಿಂಗಜಂಗಮ ಪ್ರೇಮಿಗಳು. ಮೃತ್ಯುಂಜಯ ವಟುಗಳನ್ನು ಬಹಳ ಆದರದಿಂದ ಬರಮಾಡಿಕೊಂಡರು. ಅಲ್ಲಿ ಕೆಲಕಾಲ ನಿಂತರು, ಓದಿದರು. ಆದರೂ ಅವರು ಹುಡುಕುತ್ತಿದ್ದ ಗುರಿ ಕಾಣದಾಯಿತು. ಅವ್ಯಕ್ತವೇದನೆ ಒಳಗೊಳಗೆ ಮಿಡಿಯುತ್ತಿತ್ತು. ಆ ವೇದನೆ ಪ್ರಬಲವಾಗಲು ನಿಂತಸ್ಥಾನದಿಂದ ಎದ್ದುಬಿಡುವರು. ಸಕ್ಕರೆಯ ಕರಡೆಪ್ಪನವರ ಪಾಠಶಾಲೆಯಿಂದ ಕೊಟ್ಟೂರಿಗೆ ಪ್ರಯಾಣ. ಕೊಟ್ಟೂರ ಬಸವೇಶ್ವರನ ದೇವಾಲಯ ಮಂಗಲಗೀತವಾದ್ಯಧ್ವನಿಗಳಿಂದ ತುಂಬಿ ಹೋಗಿತ್ತು. ಭಕ್ತರು ತಂಡತಂಡವಾಗಿ ಬಂದು ಕಾಯಿ ಕರ್ಪೂರ ನೈವೇದ್ಯಗಳನ್ನು ಅರ್ಪಿಸುತ್ತಿದ್ದರು: 'ನಾನೇನು ಮಾಡಲಿ ಬಡವನಯ್ಯ' ಎಂದು ಮೃತ್ಯುಂಜಯ ಕೊಟ್ಟೂರೇಶನಿಗೆ ತನ್ನನ್ನೇ ಅರ್ಪಿಸಿಕೊಂಡ. ಎರಡು ನಿಮಿಷ ಕಣ್ಣು ಮುಚ್ಚಿ ಅವಿರಳಾನಂದದಲ್ಲಿ ಲೋಲಾಡಿದ. ಮತ್ತೆ ಎಚ್ಚರ. ನಿಂತರೂ ನಿಲ್ಲದಂತೆ ಕಾಲುಗಳು ಜಗ್ಗುತ್ತಿದ್ದವು. ದಾರಿಯಲ್ಲಿ ಕುಡುತಿನಿಗೆ ಬಂದರು. ಒಂದು ಬಿಲ್ವವೃಕ್ಷದ ಕೆಳಗೆ ನಿಂತು, ತುಂಬೂರಿ ಬಾರಿಸುತ್ತ ಹಾಡತೊಡಗಿದರು. ಅನೇಕ ಜನರು ಆ ದಿವ್ಯಧ್ವನಿಯನ್ನು ಲಾಲಿಸಲು ಅಲ್ಲಿಗೆ ಬಂದರು. ಹಾಡು ಮುಗಿದಾಗ ಅವರು ಭಿಕ್ಷೆಯೆಂದು ಹಣಕೊಟ್ಟರು. ಕೂಡಿದ ಹಣವನ್ನೆಲ್ಲ ಅಲ್ಲಿಯ ಕನ್ನಡ ಶಾಲೆಯ ಶಿಕ್ಷಕರಿಗೆ ಕೊಟ್ಟು, ಬಡಮಕ್ಕಳಿಗೆ ಪಾಟಿಪುಸ್ತಕ ಕೊಡಿಸುವಂತೆ ಹೇಳಿ ಮುಂದೆ ಹೊರಟರು. ಉಜ್ಜಯನಿಗೆ ದಯಮಾಡಿಸಿದರು. ಉಜ್ಜಯನಿಯ ಪೀಠವನ್ನು ದರ್ಶನ ಮಾಡಿ ಅಲ್ಲಿ ಪ್ರಸಾದ ಪಡೆದರು. ಅಲ್ಲಿಂದ ಕಾನಾಮಡುವಿಗೆ ಆಗಮನ. ಅಲ್ಲಿಯ ಶರಣಬಸವೇಶ್ವರಸ್ವಾಮಿಗಳಿಗೆ ನಮಸ್ಕರಿಸಿ ನಿಂತರು. ಶರಣಬಸವೇಶ್ವರಸ್ವಾಮಿಗಳು ಈ ಬಾಲ ವಟುವಿನ ಚೈತನ್ಯವನ್ನು ಕಂಡು ಆತನಿಗೆ ಜೋಳಿಗೆ, ಬೆತ್ತ, ಕಂಬಳಿ ಕೊಟ್ಟು, ಮನೆಮನೆಗೆ ಹೋಗಿ ಕಂತಿ ಭಿಕ್ಷೆ ಮಾಡಲು ತಿಳಿಸಿದರು. ಒಂದು ತಿಂಗಳ ವರೆಗೆ ಕಾನಾಮಡುವಿನಲ್ಲಿ ನಿಂತರು. ಮನೆಮನೆಗೆ ಹೋಗಿ ಕಂತಿಭಿಕ್ಷೆಮಾಡಿ, ಅದನ್ನು ಅಲ್ಲಿನ ದಾಸೋಹಕ್ಕೆ ಅರ್ಪಿಸುವರು. ದಾಸೋಹದ ದಾರಿ ಅಸ್ಪಷ್ಟವಾಗಿ ಅವರ ಮನದಲ್ಲಿ ಆಗಲೇ ಮೂಡಿರಬೇಕು. ಶರಣಬಸವೇಶ್ವರಸ್ವಾಮಿಗಳು ಕೊಟ್ಟ ಜೋಳಿಗೆ

ಅಕ್ಷಯಭಾಂಡಾರದ ಸಂಕೇತವಾಗಿರಬೇಕು. ಶರಣ ಮಾರ್ಗದ ಅರಿವು ಕರಿಗೊಳ್ಳುವುದರಲ್ಲಿತ್ತು. ಬಾಲವಟು ಕಾನಾಮಡುವಿನಿಂದ ಬ್ಯಾಡಗಿಗೆ ಹೋದರು. ಅಲ್ಲಿ ಮುಪ್ಪಿನೇಂದ್ರಸ್ವಾಮಿಗಳ ದರ್ಶನ ಆಶೀರ್ವಾದಗಳನ್ನು ಪಡೆದು ಹುಬ್ಬಳ್ಳಿಗೆ ಬಂದರು. ಹಾಲಕೆರೆಗೆ ಹೋದರು. ಹಾಲಕೆರೆಯೆಂದರೆ ಅನ್ನದಾನಸ್ವಾಮಿಗಳ ಪುಣ್ಯಭೂಮಿ. ಆಗ, ಜನ 'ರಾಮೇಶ್ವರಕ್ಕೆ ಹೋಗುವುದು ಕಷ್ಟವಾದರೆ ಹಾಲಕೆರೆಗೆ ಹೋಗಬೇಕು' ಎಂದು ಹೇಳುತ್ತಿದ್ದರು. ಹಾಲಕೆರೆಯ ಅನ್ನದಾನಸ್ವಾಮಿಗಳು ರಾಮೇಶ್ವರಲಿಂಗ ಸಮಾನರೆಂಬ ಭಾವನೆ ಜನರಲ್ಲಿ ಮೂಡಿತ್ತು. ಮೃತ್ಯುಂಜಯ ವಟು ಹಾಲಕೆರೆ ಸ್ವಾಮಿಗಳ ಆಶೀರ್ವಾದವನ್ನು ಪಡೆದರು. ಶ್ರೀಗಳು ಮೃತ್ಯುಂಜಯನ ವೈರಾಗ್ಯವನ್ನೂ ಕರ್ತವ್ಯನಿಷ್ಠೆಯನ್ನೂ ಕಂಡು, ಈತನಿಂದ ಸಮಾಜ ಉದ್ಧಾರವಾಗಲೆಂದು ಹರಸಿದರು. ಹಾಲಕೆರೆಯಿಂದ ಅಬ್ಬಿಗೇರಿಗೆ ಬಂದರು. ಅಲ್ಲಿ ಒಂದು ದೊಡ್ಡ ಸಂಸ್ಕೃತ ಪಾಠಶಾಲೆ. ಬಾಲ್ಯದಲ್ಲಿ ಅಮರಕೋಶಕ್ಕೆ ಬೇಸತ್ತು ನಿಜಗುಣರ ಕೈವಲ್ಯಪದ್ಧತಿಗೆ ಒಲಿದ ಮನಸ್ಸು ಈಗ ಅಬ್ಬಿಗೇರಿಯ ಪಾಠಶಾಲೆಯಲ್ಲಿ ನಡೆಯುತ್ತಿದ್ದ ಪಾಠಗಳನ್ನು ಕಂಡು ಬೆಕ್ಕಸ ಬೆರಗಾಯಿತು. ಅಲ್ಲಿ ಮಿಕ್ಕವರು ವಿಷಯವನ್ನು ಕಂಠೋಕ್ತವಾಗಿ ಹೇಳುತ್ತಿದ್ದರೆ ಮೃತ್ಯುಂಜಯ ಅದನ್ನು ಅನುಭವಿಸಿ ಅರ್ಥಮಾಡಿಕೊಳ್ಳುತ್ತಿದ್ದ. 'ಕೆಲವಂ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಗಳಿಂ ಕೇಳುತಂ, ಕೆಲವಂ ಸಜ್ಜನಸಂಗದಿಂದ ಅರಿಯುತ್ತ' ಮೃತ್ಯುಂಜಯ ಸಂಚಾರ ಮುಂದುವರಿಸಿದ. ಅಬ್ಬಿಗೇರಿಯಿಂದ ಸವದತ್ತಿಗೆ, ಅಲ್ಲಿ ಒಂದೆರಡು ದಿನ ನಿಂತು ನೇರವಾಗಿ ಸೊಲ್ಲಾಪುರಕ್ಕೆ ಸಂಚರಿಸಿದರು. ಸೊಲ್ಲಾಪುರದ ವೀರೇಶ ಶರಣರು ಪವಾಡ ಪುರುಷರು. ಅವರ ಸನ್ನಿಧಿಯಲ್ಲಿ ಮೃತ್ಯುಂಜಯನ ಮನಸ್ಸು ಪ್ರಸನ್ನತೆಯನ್ನು ಪಡೆಯಿತು. ವಾರದ ಮಲ್ಲಪ್ಪನವರ ಶಾಲೆಗೆ ಬಂದರು. ವಾರದ ಮಲ್ಲಪ್ಪನವರೆಂದರೆ ವೀರಶೈವ ಸಮಾಜದ ಸಮಗ್ರತೆ, ಉದ್ಧಾರಗಳಿಗಾಗಿ ಟೊಂಕಕಟ್ಟಿನಿಂತವರು. 'ಮೃತ್ಯುಂಜಯನಂಥ ವಟು ತಮ್ಮಲ್ಲಿ ಉಳಿದರೆ ನಮ್ಮ ಸಮಾಜದ ಭಾಗ್ಯ ತೆರೆಯುತ್ತದೆ' ಎಂದು ಉದ್ಗರಿಸಿದರು. ಮೃತ್ಯುಂಜಯ ಒಂದು ವಾರ ಅಲ್ಲಿ ನಿಂತರು. ಧರ್ಮಗ್ರಂಥಗಳನ್ನು ಅಲ್ಪಸ್ವಲ್ಪ ಓದತೊಡಗಿದರು. ಸೊನ್ನಲಿಗೆಯ ಸಿದ್ಧರಾಮೇಶ್ವರ, ಆತನು ಪ್ರತಿಷ್ಠಾಪಿಸಿದ ಹಲವಾರು ಲಿಂಗಗಳು, ರೇವಣಸಿದ್ಧೇಶ್ವರರು ಬಂದು ನಿಂತ ನೆಲೆ, ಕೆರೆ–ದೇವಾಲಯ ಇವನ್ನೆಲ್ಲ

ಸಂಚರಿಸಿ ಅಂಕಲಗಿಗೆ ಬಂದರು. ಅಂಕಲಗಿಯ ಅಡವಿಯಸ್ವಾಮಿ ಮಹಾತಪಸ್ವಿಗಳು. ಅವರ ದರ್ಶನವಾದೊಡನೆಯೇ ಮೃತ್ಯುಂಜಯ ವಟುವಿಗೆ ಅಲ್ಲಿ ನಿಲ್ಲಬೇಕೆನಿಸಿತು ; ನಿಂತರು. ನಿತ್ಯವೂ ಸ್ವಾಮಿಯ ಸೇವೆಯನ್ನು ಪೂರೈಸುವುದು, ಮಧುರಕಂಠದಿಂದ ಭಕ್ತಿಗೀತೆಗಳನ್ನು ಹಾಡುವುದು, ಮೃತ್ಯುಂಜಯನಿಗೆ ತುಂಬ ಇಷ್ಟ. ಆ ಪದ್ಯಗಳನ್ನು ಕೇಳುತ್ತ ಶ್ರೀಗಳು ರೋಮಾಂಚನಗೊಂಡು,ಮನಮೆಚ್ಚಿ ಮರಿಯ ಮೈದಡವುತ್ತಿದ್ದರು. ಹೀಗೆ ಕೆಲವು ದಿನ ಕಳೆಯುವಷ್ಟರಲ್ಲಿ ಮೃತ್ಯುಂಜಯನಿಗೆ ಕಾಶಿಗೆ ಹೋಗಬೇಕೆಂಬ ಇಚ್ಛೆ ಪ್ರಬಲವಾಯಿತು. ಅಲ್ಲಿ ವಿಶ್ವನಾಥನ ದರ್ಶನ ಮಾಡಿಕೊಳ್ಳಬೇಕು, ವಿದ್ಯೆ ಪಡೆಯಬೇಕು ಎಂಬ ಹಂಬಲ ಹಣ್ಣಾಯಿತು. ಅಂಕಲಗಿಯಸ್ವಾಮಿಗಳು ಮೃತ್ಯುಂಜಯನ ಮನಸ್ಸಿನ ಹೊಯ್ದಾಟವನ್ನು ಅರಿತು 'ಕಾಶಿಗೆ ಹೋಗುವುದಕ್ಕಿಂತ ಅಥಣಿಗೆ ಹೋಗುವುದೇ ಮೇಲು, ಅಥಣಿಯ ಶಿವಯೋಗಿ ಕಾಶಿವಿಶ್ವನಾಥನಿಗೆ ಕಡಿಮೆಯಲ್ಲ. ರಾಮೇಶ್ವರಕ್ಕೆ ಹೋಗುವುದಕ್ಕಿಂತ ಹಾಲಕೆರೆಗೆ ಹೋಗುವುದು ಲೇಸು. ಅನ್ನದಾನೇಶ್ವರ ಸ್ವಾಮಿಗಳಿಗಿಂತ ರಾಮೇಶ್ವರನೇನು ದೊಡ್ಡವನಲ್ಲ' ಎಂದು ಅಪ್ಪಣೆ ಕೊಡಿಸಿದರು. ಮೃತ್ಯುಂಜಯನಿಗೆ ಥಟ್ಟನೆ ಏನೋ ಹೊಳೆದಂತಾಯಿತು. ಹಾಲಕೆರೆಯ ಅನ್ನದಾನಸ್ವಾಮಿಗಳ ದರ್ಶನದಿಂದ ಪಡೆದ ಅನುಭವದ ಅರಿವಾಯಿತು. ಅಥಣಿಗೆ ಹೋಗಲೇಬೇಕೆಂಬ ಸಂಕಲ್ಪ ದೃಢವಾಯಿತು. ಅಥಣಿಯ ಕಡೆಗೆ ಪ್ರಯಾಣ ಬೆಳೆಸಿದರು.

## ನೀನೇ ಕಸಹೊಡಿ

'ಅಥಣಿ ಕಾಶಿಗಿಂತ ಸಣ್ಣದಲ್ಲ, ವಿಶ್ವನಾಥ ಶಿವಯೋಗಿಗಿಂತ ದೊಡ್ಡವನಲ್ಲ' ಎಂದು ಗುಣಗುಣಿಸುತ್ತ ಸಂಜೆಯ ಸಮಯಕ್ಕೆ ಅಥಣಿಯ ಗಚ್ಚಿನಮಠಕ್ಕೆ ಮೃತ್ಯುಂಜಯ ವಟುವಿನ ಆಗಮನ. ಬಕುಲಮಂಟಪದಲ್ಲಿ ಶಿವಯೋಗಿಗಳು ವಿರಾಜಮಾನರಾಗಿದ್ದರು. ಶಿಷ್ಯ ಸಿದ್ಧಲಿಂಗಸ್ವಾಮಿಗಳೂ ಅಲ್ಲಿದ್ದರು. ಭಕ್ತರು ದರ್ಶನಕ್ಕೆ ಬಂದಿದ್ದರು. ಇದನ್ನೆಲ್ಲ ಕಂಡ ಮೃತ್ಯುಂಜಯನಿಗೆ ಕೈಲಾಸವನ್ನು ಕಂಡಂತಾಯಿತು. ಶಿವಯೋಗಿಗಳ ಪಾದಕ್ಕೆ ದೂರದಿಂದಲೇ ನಮಸ್ಕರಿಸಿದರು. ಅಲೆದಾಡಿದ ತನುವಿಗೆ ಒಂದು ನೆಲ ಸಿಕ್ಕಿತು. ಹೊಯ್ದಾಡಿದ ಮನಕ್ಕೆ ಒಂದು ನೆಲೆ ಸಿಕ್ಕಿತು. ರಾತ್ರಿ

ಅಲ್ಲಿಯೇ ಮಲಗಿದರು. ಕೈಲಾಸದ ಕನಸು ಕಾಣುತ್ತ ರಾತ್ರಿಗಳೆದರು. ಬೆಳಗಿನ ಜಾವ ಎದ್ದು ಹಸುವಿನ ಕೊಟ್ಟಿಗೆಯನ್ನು ಹಸನಮಾಡಿದರು. 'ಸೇವಾಜೀವನ ದೀಕ್ಷೆ' ಇಲ್ಲಿ ಪ್ರಾಪ್ತವಾಯಿತು. ನಿತ್ಯವೂ ಹೀಗೆ ಸೇವೆ ಮಾಡುತ್ತಿದ್ದ ಮರಿಯನ್ನು ಸಿದ್ಧಲಿಂಗಸ್ವಾಮಿಗಳು ತುಂಬ ಮೆಚ್ಚಿಕೊಂಡರು. ಶಿವಯೋಗಿಗಳು ಏಳುವ ಮೊದಲೇ ಅವರ ಕೋಣೆಯ ಕಸಗುಡಿಸತೊಡಗಿದರು. ನಾಲ್ಕು ದಿನಗಳು ಕಳೆದವು. ತಾವು ಏಳದ ಮುನ್ನ ಯಾರೋ ಬಂದು ಕಸಗುಡಿಸುತ್ತಿರುವುದು ಶಿವಯೋಗಿಗಳ ಗಮನಕ್ಕೆ ಬಂದಿತು. ಅವರದು ಒಂದು ವೀರವ್ರತ. ತಾವು ಮಾಡುವ ಕೆಲಸವನ್ನು ಇನ್ನೊಬ್ಬರ ಕೈಯಿಂದ ಮಾಡಿಸತಕ್ಕುದಲ್ಲ ಎಂಬುದು ಅವರ ನಿರ್ಧಾರ. ಶಿವಪೂಜೆಗೆ ಬೇಕಾಗುವ ಪತ್ರಿಪುಷ್ಪ ಸಂಗ್ರಹಿಸುವುದು, ಬಟ್ಟೆ ಸ್ವಚ್ಛಮಾಡಿಕೊಳ್ಳುವುದು, ಕಸಗುಡಿಸುವುದು ಎಲ್ಲ ಕೆಲಸಗಳನ್ನೂ ತಾವೇ ಪೂರೈಸಿಕೊಳ್ಳುವರು. ಅದರಲ್ಲಿಯೇ ಅವರಿಗೆ ತೃಪ್ತಿ.

ಒಂದು ದಿನ. ಹೊರಗೆ ಕೀಲಿ ಹಾಕಿತ್ತು. ಮೃತ್ಯುಂಜಯ ವಟು ಗೋಡೆಯನ್ನು ಹಾರಿ ಒಳಗೆ ಬಂದು ಕಸಬರಿಗೆ ಹುಡುಕತೊಡಗಿದ. ಶಿವಯೋಗಿಗಳು ನೋಡಿದರು. ಮೃತ್ಯುಂಜಯ ಗದ್ಗದನೆ ನಡುಗುತ್ತ ಅಲ್ಲಿ ನಿಂತ. ಶಿವಯೋಗಿಗಳ ಕೃಪೆಯಾಯಿತು, ಅವನ ಮೇಲೆ. 'ಬಿದ್ದಿಗಿದ್ದೀ ನೀನೇ ಕಸ ಹೊಡಿ' ಎಂದು ತಮ್ಮ ಕೈಯೊಳಗಿದ್ದ ಕಸಬರಿಗೆಯನ್ನು ಮೃತ್ಯುಂಜಯನ ಕೈಗೆ ಕೊಟ್ಟರು. ಅದ್ಭುತ ಘಟನೆಯಿದು. ಮುಂದೆ ಸಮಾಜದ ಕಸಗುಡಿಸಿ ಅದನ್ನು ಹಸನು ಮಾಡಬೇಕೆಂಬುದರ ಸಂಕೇತವೋ ಏನೋ ! ಯಾರ ಕೈಯಿಂದಲೂ ಕೆಲಸ ಮಾಡಿಸಿಕೊಳ್ಳದ ಅಥಣಿ ಮುರುಗೇಶ ಮೃತ್ಯುಂಜಯನ ಸೇವೆಯನ್ನು ಸ್ವೀಕರಿಸಲು ಸಿದ್ಧರಾದುದು ಒಂದು ದಿವ್ಯಕೃಪೆ. ಈಗ ಮೃತ್ಯುಂಜಯನಿಗೆ ನಿಜದೀಕ್ಷೆಯಾಯಿತು. ಶ್ರೀಗಳು ಕೊಟ್ಟ ಕಸಬರಿಗೆಯೇ ಸಮಾಜಸೇವೆಯ ಕೈಕಂಕಣವಾಯಿತು.

ಹೀಗೆ ಮೃತ್ಯುಂಜಯನ ಲೀಲೆ ಅಥಣಿಯಲ್ಲಿ ನೆಲೆಯೂರಿನಿಂತಿತು. ಸಿದ್ಧಲಿಂಗಸ್ವಾಮಿಗಳು ಮೃತ್ಯುಂಜಯನ ಪೂರ್ವಾಪರ ಸನ್ನಿವೇಶಗಳನ್ನೆಲ್ಲ ತಿಳಿದುಕೊಂಡರು. ಮನೆಯಲ್ಲಿ, ಮಠದಲ್ಲಿ ಹೇಳದೆ ಗುರುವನರಸುತ್ತ ಮೃತ್ಯುಂಜಯ ಇಷ್ಟು ದೂರ ಸಂಚರಿಸಿ ಬಂದುದನ್ನು ಕೇಳಿ ಮರುಗಿದರು. ಆತನ ಭಕ್ತಿಯ ಬಗೆಗೆ ಮೆಚ್ಚುಗೆಯಾಯಿತು ; ಆದರೆ ತಂದೆಯ ಬಗೆಗೆ ಕನಿಕರವೆನಿಸಿತು. ಮೊದಲು ಇಂಗಳಹಳ್ಳಿಗೆ ಮೃತ್ಯುಂಜಯನ ಆಗಮನದ

ಸುದ್ದಿಯನ್ನು ತಿಳಿಸಿದರು. ಕಾಂತೆಪ್ಪನವರೂ ಊರ ಜನರೂ ಅತ್ಯಂತ ಸಂತೋಷಪಟ್ಟರು. ಮಗು ಎಲ್ಲಿ ಹೋದನೋ ಯಾವ ಅಡವಿಯ ಪಾಲಾದನೋ ಎಂದು ಚಿಂತಿಸುತ್ತಿದ್ದ ಕಾಂತೆಪ್ಪನವರಿಗೆ ಸಮಾಧಾನವಾಯಿತು. ನೇರವಾಗಿ ಅಥಣಿಗೆ ಬಂದರು. ಅಲ್ಲಿಯದೆಲ್ಲವನ್ನೂ ಕಂಡು ಸಂತೋಷಪಟ್ಟರು. ಮೃತ್ಯುಂಜಯಸ್ವಾಮಿಗಳಿಗಾದರೋ ಇಲ್ಲದ ಭಯ ; ಮತ್ತೆ ಎಲ್ಲಿ ತಮ್ಮನ್ನು ಇಂಗಳಹಳ್ಳಿಗೆ ಕರೆದೊಯ್ಯುವರೋ ಎಂದು. ದೂರದಿಂದಲೇ ಮೃತ್ಯುಂಜಯ ತಂದೆಯನ್ನು ನೋಡಿ ತನ್ನ ಸೇವಾಕಾರ್ಯದಲ್ಲಿ ತೊಡಗಿದ. ಕಾಂತೆಪ್ಪನವರು ಹರ್ಷಪುಲಕಿತರಾಗಿ ಒಂಟಿಗಾಲಿನಿಂದ ಕುಣಿದು, ಸ್ತುತಿಸಿ, ಭಕ್ತಿಪುಷ್ಪವನ್ನರ್ಪಿಸಿ ಹೊರಟುಹೋದರು.

## ಗುರು ಸೇವೆ

ಇದು ವರೆಗೆ ಕೊಟ್ಟಿಗೆ ಹಸನು ಮಾಡುವ, ಅಂಗಳ ಕಸಹೊಡೆಯುವ ಸೇವೆ ಪ್ರಾಪ್ತವಾದ ಮೃತ್ಯುಂಜಯನಿಗೆ ಈಗ ಶಿವಯೋಗಿಗಳು ಪತ್ರಿಪುಷ್ಪಗಳನ್ನು ತರಲು ಅಪ್ಪಣೆ ಕೊಡಿಸಿದರು. ಮೃತ್ಯುಂಜಯನಿಗೆ ಎಲ್ಲಿಲ್ಲದ ಆನಂದ. ಬೆಳಗಿನ ಜಾವದಲ್ಲಿ ಎದ್ದು ಪುಷ್ಪಗಳನ್ನು ಬಿಡಿಸುವುದೆಂದರೆ ಮೃತ್ಯುಂಜಯನಿಗೆ ಪರಮಾನಂದ. ಶಿವಯೋಗಿಗಳ ಲಿಂಗವನ್ನಲಂಕರಿಸುವ ಪುಣ್ಯವನ್ನು ಪಡೆದ ಪುಷ್ಪಗಳನ್ನು ಮೃತ್ಯುಂಜಯ ಮನಮುಟ್ಟಿ ನಮಸ್ಕರಿಸಿ ಕೊಯ್ಯುವನು. ಮೃತ್ಯುಂಜಯನ ಸೇವೆ ಹೀಗೆ ದಿನವೂ ನಡೆಯಿತು. ದಿನಕ್ಕೊಂದು ಚಂದ ಶಿವಯೋಗಿಗಳ ಕೃಪೆ ಬೆಳೆಯತೊಡಗಿತು. ಮೃತ್ಯುಂಜಯನ ಭಕ್ತಿಯ ಆಳವನ್ನು ಕಂಡು ಶಿವಯೋಗಿಗಳು ಹಿರಿಹಿರಿ ಹಿಗ್ಗುವರು. ಆತನು ಮುಗ್ಧಭಾವದಿಂದ ಹಾಡುವ ಹಾಡುಗಳನ್ನು ಕೇಳಿ ಆನಂದಿಸುವರು. ತಾವು ಸಂಚಾರಕ್ಕೆ ಹೋಗುವಾಗ ಮೃತ್ಯುಂಜಯನನ್ನು ಸಂಗಡವೇ ಕರೆದುಕೊಂಡು ಹೋಗುವರು.

ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು, ಬಕುಲಮಂಟಪವನ್ನು ಹಸನಮಾಡಿ, ಸ್ನಾನಗೈದು, ಹೂಪತ್ರಿಗಳನ್ನು ಕೊಯ್ದು ಮೃತ್ಯುಂಜಯ, ಶಿವಯೋಗಿಗಳ ಪೂಜಾಸಾಮಗ್ರಿಗಳನ್ನು ಅಣಿಗೊಳಿಸುವನು. ಅವರ ಪೂಜೆಯನ್ನು ಕಂಡು ಬೆಬ್ಬನೆ ಬೆರಗಾಗುವನು. ಲಿಂಗದಲ್ಲಿ ದೃಷ್ಟಿಯನ್ನಿಟ್ಟ ಶಿವಯೋಗಿಗಳು ಎರಡು ನಿಮಿಷದಲ್ಲಿ ಪರಮಾನಂದದಲ್ಲಿ ಲೋಲಾಡುವರು.

ಇದನ್ನು ಕಂಡು 'ಹರಹರ ಮಹಾದೇವ' ಎಂದು ಮೃತ್ಯುಂಜಯ ಸಾಷ್ಟಾಂಗ ನಮಸ್ಕರಿಸುವನು. ವಟುವಿನ ವರ್ತನೆಯಿಂದ ಶಿವಯೋಗಿಗಳಿಗೆ ಅಮಿತವಾದ ಆನಂದ; ವಟುವಿಗೆ ಹೆಚ್ಚು ಹೆಚ್ಚಿನ ಸೇವೆಯನ್ನು ವಹಿಸಿಕೊಟ್ಟರು. ಸ್ನಾನವಾದ ಮೇಲೆ ಶಿವಯೋಗಿಗಳ ಬಟ್ಟೆಯನ್ನು ತೊಳೆಯುವ ಕೆಲಸವನ್ನು ಮೃತ್ಯುಂಜಯವಟು ಮಾಡತೊಡಗಿದ. ಶಿವಯೋಗಿಗಳ ಮಾಟಕೂಟವನ್ನೆಲ್ಲ ಮೃತ್ಯುಂಜಯ ಬಹು ಸೂಕ್ಷ್ಮವಾಗಿ ನಿರೀಕ್ಷಿಸತೊಡಗಿದ. ಶಿವಯೋಗಿಗಳ ಜೀವನಕ್ರಮವೇ ಮೃತ್ಯುಂಜಯವಟುವಿನ ಜೀವನಕ್ರಮದಲ್ಲಿ ಅಳವಡತೊಡಗಿತು. ಸದುವಿನಯ, ಸದಾಚಾರ, ಲಿಂಗಪೂಜೆ ಇವೆಲ್ಲ ಮೃತ್ಯುಂಜಯನ ಜೀವನದಲ್ಲಿ ಸಾಕಾರಗೊಳ್ಳತೊಡಗಿದವು.

ಒಂದು ದಿನ ಮೃತ್ಯುಂಜಯವಟು ಶಿವಯೋಗಿಗಳ ಹಾಗು ಅವರ ದರ್ಶನಕ್ಕೆ ಬಂದ ಸ್ವಾಮಿಗಳ ಪೂಜೆ-ಪ್ರಸಾದವಾದ ಮೇಲೆ ಬಟ್ಟೆಗಳನ್ನು ತೊಳೆಯಲು ಹಳ್ಳಕ್ಕೆ ಹೋದರು. ಎಲ್ಲ ಬಟ್ಟೆಗಳನ್ನೂ ಬಹಳ ಎಚ್ಚರಿಕೆಯಿಂದ ಭಕ್ತಿಭಾವದಿಂದ ಮಡಿಮಾಡಿದರು. ತಿರುಗಿ ಬರುವಾಗ ಶಿವಯೋಗಿಗಳ ಚಿತಾಸನವನ್ನೇ ಮರೆತು ಮಿಕ್ಕ ಬಟ್ಟೆಗಳನ್ನೆಲ್ಲ ತೆಗೆದುಕೊಂಡು ಬಂದರು. ರಾತ್ರಿ ಮೃತ್ಯುಂಜಯರಿಗೆ ನೆನಪಾಯಿತು. ಶಿವಯೋಗಿಗಳು ತಾವು ಮಾಡಿದ ಅಪರಾಧಕ್ಕೆ ಎಲ್ಲಿ ಕೋಪಿಸುವರೋ ಎಂದು ಭಯವಿಹ್ವಲಿತರಾದರು. ನೆರೆಯ ತೇಲಸಂಗ ಗ್ರಾಮಕ್ಕೆ ಓಡಿಹೋದರು. ಇದನ್ನು ತಿಳಿದ ಶಿವಯೋಗಿಗಳಿಗೆ ಬಹಳ ಹಳಹಳಿಯೆನಿಸಿತು. ಕುದುರೆ ಮತ್ತು ಸೇವಕನನ್ನು ಕಳಿಸಿ ತೇಲಸಂಗದಿಂದ ಅವರನ್ನು ಕರೆಸಿಕೊಂಡರು. ಶಿವಯೋಗಿಗಳ ಅಂತಃಕರಣದ ಅಮೃತವರ್ಷ ವಟು ಮೃತ್ಯುಂಜಯನ ಮೇಲೆ ಧಾರಾಕಾರವಾಗಿ ಸುರಿಯತೊಡಗಿತು. ನೀರಲ್ಲಿ ನಿಂತು ಬಟ್ಟೆ ತೊಳೆಯುವುದರಿಂದ ಸೆಲೆತುಹೋದ ವಟುವಿನ ಕಾಲುಬೆರಳುಗಳನ್ನು ಕಂಡು ಅದಕ್ಕೆ ಔಷಧಿ ಹಚ್ಚಿ ಬೇಗನೆ ಗುಣಪಡಿಸಿದರು. ಮೃತ್ಯುಂಜಯ ಒಮ್ಮೆ ಮೂರ್ಛೆ ಹೋದಾಗ ಶಿವಯೋಗಿಗಳೇ ಪಾದೋದಕ ಸಿಂಪಡಿಸಿ ಎಚ್ಚರಿಸಿದ್ದರು. ಮೃತ್ಯುಂಜಯನ ಭಕ್ತಿ ಹೆಚ್ಚುತ್ತ ಹೋದಂತೆ ಶಿವಯೋಗಿಗಳ ಮೆಚ್ಚುಗೆಯೂ ಹೆಚ್ಚಾಗ ತೊಡಗಿತು. ಮೃತ್ಯುಂಜಯವಟು ಈಗ ಕಂತೆ ಭಿಕ್ಷೆಗೂ ಹೋಗತೊಡಗಿದರು. ಇವರ ದರ್ಶನದ ಭಾಗ್ಯವನ್ನು ಪಡೆದ ಮನೆಯವರು ಭಕ್ತಿಭಾವದಿಂದ ನೀಡಲು ಅವರ ಬುಟ್ಟಿ ಬೇಗನೇ ತುಂಬುವದು. ಶಿವಯೋಗಿಗಳು ನಿತ್ಯ ನಿತ್ಯ ಮೃತ್ಯುಂಜಯನ ಮನಸ್ಸನ್ನು

ಪ್ರವೇಶಿಸತೊಡಗಿದರು. ಒಂದು ದಿನ ಶಿವಯೋಗಿಗಳ ಶಿವಪೂಜೆ ನಡೆದಿದೆ. ಯಾರೋ ಭಕ್ತರು ಬಂದು ನಮಸ್ಕರಿಸಿ ಒಂದು ರೂಪಾಯಿ ದಕ್ಷಿಣೆಯನ್ನು ಇಟ್ಟುಹೋಗಿದ್ದರು. ಮೃತ್ಯುಂಜಯುವಟು ಒಳಗೆ ಬಂದೊಡನೆಯೇ 'ಅಲ್ಲಿ ಚೇಳು ಇದೆ ಅದನ್ನು ಹೊರಗೆ ಹಾಕು' ಎಂದು ಶಿವಯೋಗಿಗಳು ಅಪ್ಪಣೆ ಕೊಡಿಸಿದರು. ಅತ್ತಿತ್ತ ನೋಡಿ ಚೇಳು ಕಾಣದೆ ಮೃತ್ಯುಂಜಯುಮರಿ ಸುಮ್ಮನೆ ನಿಂತರು. ಕೊನೆಗೆ ಶಿವಯೋಗಿಗಳು ಬೆರಳುಮಾಡಿ ರೂಪಾಯಿ ತೋರಿಸಿದರು. ಮೃತ್ಯುಂಜಯುವಟು ಅದನ್ನು ದೂರ ಎಸೆದರು. ಈ ಘಟನೆ ಮೃತ್ಯುಂಜಯುನ ಮನಸ್ಸಿನ ಮೇಲೆ ಶಾಶ್ವತ ಪರಿಣಾಮುವನ್ನು ಬೀರಿತು. ಹೀಗಾಗಿ ಧನ, ಅದರ ಮೇಲಿನ ವ್ಯಾಮೋಹ, ಅದರ ಸಂಗ್ರಹ— ಈ ವಿಚಾರ ಅವರ ಜೀವನದಲ್ಲಿ ಎಂದೂ ಕಾಣಿಸಿಕೊಳ್ಳಲಿಲ್ಲ.

ಶಿವಯೋಗಿಗಳು ಒಮ್ಮೊಮ್ಮೆ ಮೃತ್ಯುಂಜಯುಮರಿಯೊಡನೆ ತಾವೂ ಬಿಲ್ವಪತ್ರೆಗಳನ್ನೆತ್ತುತ್ತಿದ್ದರು. ಶಿವಪೂಜೆಗೆಂದು ಹೂಕೊಯ್ಯುತ್ತಿದ್ದರು. ಒಮ್ಮೆ ಒಂದು ಮುಳ್ಳು ನಟ್ಟು ಶಿವಯೋಗಿಗಳಿಗೆ ರಕ್ತ ಸುರಿಯತೊಡಗಿತು. ಮೃತ್ಯುಂಜಯು ಗಾಬರಿಯಾದರು. ಮುಳ್ಳು ಹೊರಗೆ ತೆಗೆದರು. ರಕ್ತ ನಿಂತಿತು. ಮೃತ್ಯುಂಜಯುನಿಗೆ ಆನಂದವಾಯಿತು. ಶಿಷ್ಯನೆಂದರೆ ಗುರುವಿನ ಸಾಕ್ಷಾತ್ ಕರಕಮಲಸಂಜಾತ, ಗುರುವಿನ ನೋವು–ನಲಿವು ಶಿಷ್ಯನ ನೋವು–ನಲಿವಾಗಬೇಕು. ಕೂರ್ಮ–ಕೂರ್ಮಶಿಶುವಿನ ಸ್ನೇಹದಂತಿರಬೇಕು, ಅವರಿಬ್ಬರ ಭಕ್ತಿ–ಪ್ರೇಮು. ಮೃತ್ಯುಂಜಯುನ ನಿಷ್ಠೆ ಹಾಗಿತ್ತು.

ಇನ್ನೊಂದು ಸಲ ಚಿತ್ರದುರ್ಗದ ಶ್ರೀ ಜಯದೇವ ಜಗದ್ಗುರುಗಳು ಅಥಣಿಗೆ ಆಗಮಿಸಿದರು. ಅಥಣಿಯು ಗಚ್ಚಿನಮಠ ಚಿತ್ರದುರ್ಗದ ಶಾಖಾಮಠ. ಶಿವಯೋಗಿಗಳು ಆ ಮಠದ ಅಧಿಕಾರ ವಹಿಸಿಕೊಳ್ಳಬೇಕಾಗಿತ್ತು. ಆದರೆ ವೀರವೈರಾಗ್ಯವೃತ್ತಿಯು ಅವರು ವಹಿಸಿಕೊಳ್ಳಲಿಲ್ಲ. ಮಠಕ್ಕೆ ಬಂದ ಜಯದೇವ ಜಗದ್ಗುರುಗಳು ತಮ್ಮ ಆವುಗೆಗಳನ್ನು ಬಹುದೂರ ಕಳೆದು ಬರಿಗಾಲಿನಲ್ಲಿ ನಡೆಯುತ್ತ ಶಿವಯೋಗಿಗಳಲ್ಲಿಗೆ ಬಂದರು. ಶಿವಯೋಗಿಗಳು ಸ್ವತಃ ಎದ್ದು ಜಗದ್ಗುರುಗಳನ್ನು ಸ್ವಾಗತಿಸಿ ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಮೃತ್ಯುಂಜಯುವಟುವನ್ನು ಕರೆದು ಜಗದ್ಗುರುಗಳ ಆವುಗೆಗಳನ್ನು ತರಲು ತಿಳಿಸಿದರು. ಈ ಸನ್ನಿವೇಶ ಮೃತ್ಯುಂಜಯುವಟು ಶಿವಯೋಗಿಗಳ ಮನಸ್ಸನ್ನು ಎಷ್ಟು ಪ್ರಬಲವಾಗಿ ಸೆಳೆದಿದ್ದರು ಎಂಬುದರ ದ್ಯೋತಕವಾಗಿದೆ.

ಹೀಗೆ ಮೃತ್ಯುಂಜಯವಟು ಶಿವಯೋಗಿಗಳ, ಸಿದ್ಧಲಿಂಗಸ್ವಾಮಿಗಳ, ಹರಗುರು ಚರಮೂರ್ತಿಗಳ ಹಾಗೂ ಭಕ್ತಸಮುದಾಯದ ಮೆಚ್ಚುಗೆಯನ್ನು ಪೂರ್ಣವಾಗಿ ಪಡೆದಿದ್ದರು. ಶಿವಯೋಗಿಗಳ ಅನುಗ್ರಹವಂತೂ ಅವರ ಮೇಲೆ ಸಂಪೂರ್ಣವಾಗಿದ್ದಿತು.

ಈಗ ಮೃತ್ಯುಂಜಯ ವಟುವಿಗೆ ಜಗದ್ಗುರು ಸನ್ನಿಧಿಯಲ್ಲಿ ಜಂಗಮ ಚರಪಟ್ಟವಾಗಬೇಕು. ಸಿದ್ಧಲಿಂಗಸ್ವಾಮಿಗಳೇ ಸ್ಥಲಕೊಡಬೇಕು ; ಅನುಗ್ರಹ ಮಾಡಬೇಕು. ಶಿವಯೋಗಿಗಳ ಸಂಪೂರ್ಣ ಕೃಪಾಛತ್ರದಲ್ಲಿ ಈ ಕಾರ್ಯಕ್ರಮಗಳು ನಡೆದವು. ಮೃತ್ಯುಂಜಯವಟು, ಮೃತ್ಯುಂಜಯ ಮರಿದೇವರಾದರು. ಶಿವಯೋಗಿಗಳ ಕೃಪೆಯಲ್ಲಿ ಬೆಳೆದ ವಟು ಆದರ್ಶ ಮರಿದೇವರಾದರು. ಸೇವೆ, ದಾಸೋಹ, ಕರ್ತವ್ಯನಿಷ್ಠೆ, ಸಮಾಜಪರಿಜ್ಞಾನ, ಮಾನವೀಯ ಮೌಲ್ಯ, ದೈವಭಕ್ತಿ ಇವೆಲ್ಲವುಗಳನ್ನು ವ್ಯಕ್ತವಾಗಿ, ಅವ್ಯಕ್ತವಾಗಿ ಅಳವಡಿಸಿಕೊಂಡು ಹದಿನೆಂಟು ವರ್ಷದಲ್ಲಿ ಒಂದು ಆದರ್ಶಪದವಿಗೇರಿದರು. ವೈರಾಗ್ಯವಂತೂ ಶಿವಯೋಗಿಗಳ ಸನ್ನಿಧಿಯಲ್ಲಿ ಕರಿಗೊಂಡು ಗಿರಿದುರ್ಗವಾಗಿದ್ದಿತು.

## ದಾವಣಗೇರಿಗೆ ಆಗಮನ

ದಾವಣಗೇರಿಯ ವಿರಕ್ತಮಠವು ಚಿತ್ರದುರ್ಗದ ಶಾಖಾಮಠ. ಅಲ್ಲಿಯ ಸ್ವಾಮಿಗಳು ಲಿಂಗೈಕ್ಯರಾಗಿ ಇಪ್ಪತ್ತು ವರ್ಷಗಳಾಗಿದ್ದರೂ ಆ ಮಠಕ್ಕೆ ಅಧಿಕಾರವಾಗಿರಲಿಲ್ಲ. ದಾವಣಗೇರಿಯ ಭಕ್ತರು ಜಯದೇವ ಜಗದ್ಗುರುಗಳಲ್ಲಿ ಮನವಿ ಮಾಡಿಕೊಳ್ಳಲು ಚಿತ್ರದುರ್ಗಕ್ಕೆ ಆಗಮಿಸಿದ್ದರು. ಅದೇ ಸಮಯಕ್ಕೆ ಅಥಣಿಯಿಂದ ಸಿದ್ಧಲಿಂಗಸ್ವಾಮಿಗಳು ಮೃತ್ಯುಂಜಯ ಮರಿದೇವರನ್ನು ಕೂಡಿಕೊಂಡು ಚಿತ್ರದುರ್ಗಕ್ಕೆ ಆಗಮಿಸಿದ್ದರು. ದಾವಣಗೇರಿಯ ಭಕ್ತರ ಅಭೀಪ್ಸೆಯನ್ನು ಪೂರೈಸುವ ವಿಚಾರವನ್ನು ಜಗದ್ಗುರುಗಳು ಕೈಗೆತ್ತಿಕೊಂಡಾಗ ಜಗದ್ಗುರುಗಳೂ ಸಿದ್ಧಲಿಂಗಸ್ವಾಮಿಗಳೂ ದಾವಣಗೇರಿಯ ಭಕ್ತರೂ ಒಮ್ಮತದಿಂದ ಮೃತ್ಯುಂಜಯಮರಿದೇವರ ಹೆಸರನ್ನು ಒಪ್ಪಿಕೊಂಡರು. ಅನುಗ್ರಹಮಾಡಿದ ಗುರು ಸಿದ್ಧಲಿಂಗಸ್ವಾಮಿಗಳು, ಜಯದೇವ ಜಗದ್ಗುರುಗಳು ಆದೇಶ ಮಾಡಿದರೂ

ಮೃತ್ಯುಂಜಯಸ್ವಾಮಿಗಳು ಶಿವಯೋಗಿಗಳ ಅಪ್ಪಣೆ ಪಡೆಯುವ ವರೆಗೆ ಒಪ್ಪತಕ್ಕವರಲ್ಲ. ನೇರವಾಗಿ ಅಥಣಿಗೆ ಬಂದರು.

ಅನೇಕ ದಿವಸ ಸಂಚರಿಸಿ ಕಷ್ಟಪಟ್ಟು ಒಬ್ಬ ಗುರುವನ್ನು ಅರಸಿಕೊಂಡಿದ್ದರು. ಬಸವಣ್ಣನವರಿಗೆ ಕೂಡಲಸಂಗಮನಾಥನಲ್ಲಿ ದೊರೆತ ಮನಶ್ಶಾಂತಿ, ಭಗವಾನ್ ಬುದ್ಧನಿಗೆ ಬೋಧಿವೃಕ್ಷದ ಅಡಿಯಲ್ಲಿ ದೊರೆತ ಜ್ಞಾನೋದಯಗಳೆರಡೂ ಒಟ್ಟುಗೂಡಿ ಮೃತ್ಯುಂಜಯವಟುವಿಗೆ ಅಥಣಿಯಲ್ಲಿ ಪ್ರಾಪ್ತವಾಗಿದ್ದವು. ಜನ್ಮಕೊಟ್ಟ ತಂದೆತಾಯಿಗಳ ಮೇಲಿನ ಮಮತೆ ಎಂದೋ ಹರಿದು ಹೋಗಿತ್ತು. ಕರುಣಪ್ರಸಾದಕೊಟ್ಟ ಶ್ರೀಗುರುವಿನ ಸೇವೆಯಲ್ಲಿ ಮನಸ್ಸು ನೆಟ್ಟಿತ್ತು. ಇಂಥ ಸನ್ನಿವೇಶದಲ್ಲಿ ದಾವಣಗೇರಿಗೆ ಹೋಗಬೇಕೆಂದು ಜಗದ್ಗುರುಗಳ ಅಪ್ಪಣೆಯಾಗಿದ್ದಿತು. ಈಗ ಅಥಣಿ ಶಿವಯೋಗಿಗಳ ಅನುಗ್ರಹವೂ ಆಯಿತು. ಆದರೆ ಮೃತ್ಯುಂಜಯಮರಿದೇವರಿಗೆ ಶಿವಯೋಗಿಗಳನ್ನು ಅಗಲಿಹೋಗುವೆನೆಂಬ ವೇದನೆ. ನಿತ್ಯವೂ ಶಿವಯೋಗಿಗಳ ದರ್ಶನ ತಪ್ಪುವುದೆಂಬ ದುಗುಡ ಒಂದೆಡೆಗೆ, ಅವರ ಸೇವೆಯ ಅವಕಾಶ ದೂರವಾಗುವದೆಂಬ ದುಃಖ ಮತ್ತೊಂದೆಡೆಗೆ. ಶಿವಯೋಗಿಗಳ ಆಶೀರ್ವಾದವನ್ನು ಮೀರಿ ನಡೆವುದು ವಿಹಿತವೇ ? ಜಗದ್ಗುರುಗಳ ಅಪ್ಪಣೆಯನ್ನು ಮೀರಬಲ್ಲನೆ ? ಸಿದ್ಧಲಿಂಗಸ್ವಾಮಿಗಳ ಇಚ್ಛೆಯನ್ನು ಪೂರೈಸಲಾರೆನೆ ? ಮರ್ತ್ಯಕ್ಕೆ ಬಂದ ಮೇಲೆ ಪೂರೈಸಬಹುದಾದ ಮಣಿಹವನ್ನು ಒಲ್ಲೆನೆನ್ನಬಹುದೆ ? 'ಶಿವಯೋಗಿಗಳು ಎಲ್ಲೆಡೆಯಲ್ಲಿಯೂ ಇದ್ದಾರೆ' ಎಂಬ ದೃಢಸಂಕಲ್ಪದಿಂದ ಮೃತ್ಯುಂಜಯದೇವರು ದಾವಣಗೇರಿಗೆ ಹೋಗಲು ಒಪ್ಪಿದರು. ಈ ಸಂಕಲ್ಪ ಕೇವಲ ಕಲ್ಪನೆಯಲ್ಲ. ಇದು ನಂಬುಗೆಯ ವಿಷಯ. ಶಿವಯೋಗಿಗಳು ತಮ್ಮೊಡನೆ ದಯಮಾಡಿಸುವರೆಂದು ಮೃತ್ಯುಂಜಯಸ್ವಾಮಿಗಳು ತಮ್ಮ ಜೀವನದುದ್ದಕ್ಕೂ ನಂಬಿದ್ದರು. ವಿದ್ಯಾರ್ಥಿಗಳು ಯಾರಾದರೂ ಗಟ್ಟಿಯಾಗಿ ಮಾತನಾಡಿದರೆ 'ಅಲ್ಲಿ ಶಿವಯೋಗಿಗಳಿದ್ದಾರೆ ಸಾವಕಾಶವಾಗಿ ಮಾತನಾಡಬೇಕು' ಎಂದು ಹೇಳುತ್ತಿದ್ದರು. ಅವರ ಮನಸ್ಸಿನಲ್ಲಿ ಅಚ್ಚೊತ್ತಿದಂತಾಗಿದ್ದರು, ಶಿವಯೋಗಿಗಳು. ಈಗ ಶ್ರೀಗಳು ಒಂದು ಬಗೆಯ ಅಳಲನ್ನು ಅನುಭವಿಸುತ್ತ ತವರುಮನೆ ಅಥಣಿಯನ್ನು ತೊರೆದರು ; ದಾವಣಗೇರಿಗೆ ಹೊರಟರು.

ಮೃತ್ಯುಂಜಯದೇವರು ದಾವಣಗೇರಿಗೆ ಬಂದುದು ಕ್ರಿ. ಶ. ೧೯೦೬ರಲ್ಲಿ. ಆಗ ಅವರಿಗೆ ೧೮ ವರ್ಷ ವಯಸ್ಸು. ಅಥಣಿ ಶಿವಯೋಗಿಗಳ ರಾಜತೇಜದಲ್ಲಿ ಬೆಳಗಿದ ಶ್ರೀಗಳ ವೈರಾಗ್ಯ ಚರಮಸೀಮೆಯನ್ನು ಮುಟ್ಟಿದ್ದಿತು. ದೇಶಪರ್ಯಟನ, ಶ್ರೀಗಳ ದರ್ಶನ, ಭಿಕ್ಷಾಪಾತ್ರೆಯ ಭೋಜನ ಇವೆಲ್ಲವುಗಳಿಂದ ಮಾಗಿದ ಮಹಾತ್ಮರಾಗಿದ್ದ ಇವರಿಗೆ ದಾವಣಗೇರಿಯಲ್ಲಿ ೧೯೦೬ರಂದು ಪಟ್ಟಾಭಿಷೇಕವಾಯಿತು. ಶಿವಯೋಗಿಗಳ ಆಶೀರ್ವಾದ, ಜಯದೇವ ಜಗದ್ಗುರುಗಳ ಕೃಪೆ ಇವು ಸಾಕ್ಷಿಯಾಗಿ ಸಮಾಜಸೇವಾ ದೀಕ್ಷೆಯನ್ನು ಪಡೆದಂತೆ ದಾವಣಗೇರಿಯ ವಿರಕ್ತಮಠದ ಅಧಿಕಾರ ಸ್ವೀಕರಿಸಿ, ತಮ್ಮ ಸೇವಾಘೋಷಣೆ ಮಾಡಿದರು. ಎರಡು ದಶಕಗಳ ವರೆಗೆ ಕಾಯ್ದು ಭಕ್ತವರ್ಗಕ್ಕೆ ಪರಮ ಸಂತೋಷವಾಯಿತು. ದಾವಣಗೇರಿಯ ಇತಿಹಾಸದಲ್ಲಿ, ವೀರಶೈವಸಮಾಜದ ಚರಿತ್ರೆಯಲ್ಲಿ, ಅಷ್ಟೇ ಏಕೆ ಸಮಗ್ರ ಕನ್ನಡನಾಡಿನ ಚರಿತ್ರೆಯಲ್ಲಿ ಒಂದು ಹೊಸ ಯುಗ ಪ್ರಾರಂಭವಾದಂತಾಯಿತು.

## ಬಸವಜಯಂತಿ

ಕರ್ನಾಟಕವು ವೀರಶೈವದ ನೆಲೆವೀಡು. ಇಲ್ಲಿಯ ಜನಸಂಖ್ಯೆಯ ಮೂರರಲ್ಲಿ ಒಂದು ಪಾಲು ಜನ ವೀರಶೈವರಾಗಿರುವರು. ಈ ಧರ್ಮಕ್ಕೆ ಬಸವಾದಿ ಪ್ರಮಥರ ಉಜ್ವಲ ಪರಂಪರೆಯಿದೆ. ಸಾಮಾಜಿಕ ಉತ್ಕ್ರಾಂತಿ, ಧಾರ್ಮಿಕ ಚಿಂತನೆ, ಸಾಹಿತ್ಯಿಕ ಸಂಪತ್ತುಗಳಿಂದಾಗಿ ಈ ಧರ್ಮಕ್ಕೆ ಜಾಗತಿಕ ಮಹತ್ವ ದೊರೆಯಬಹುದಾಗಿದ್ದರೂ ವಿಜಯನಗರ ಸಾಮ್ರಾಜ್ಯ ಪತನಾನಂತರ, ಕೆಳದಿ, ಬೀಳಗಿ, ಕಿತ್ತೂರು ಮೊದಲಾದ ಸಂಸ್ಥಾನಗಳು ಅಳಿದಮೇಲೆ ಅದು ಅತ್ಯಂತ ದಾರುಣ ಪರಿಸ್ಥಿತಿಯನ್ನು ಎದುರಿಸಿದುದು ಐತಿಹಾಸಿಕ ಸತ್ಯ. ಈಗ ವೀರಶೈವರು ತಮ್ಮ ಉಜ್ವಲ ಪರಂಪರೆಯನ್ನೇ ಮರೆತುಬಿಟ್ಟಿದ್ದರು. ಬಸವಾದಿ ಪ್ರಮಥರ ವಚನಗಳು, ಹರಿಹರಾದಿ ಕವಿಗಳ ಸಾಹಿತ್ಯರಾಶಿ ಎಲ್ಲಿಯೋ ಮೂಲೆಯಲ್ಲಿ ಹುಳುಗಳಿಗೆ ತುತ್ತಾಗುತ್ತಿದ್ದಿತು. ಬಹುಜನ ವೀರಶೈವರು ಇಷ್ಟಲಿಂಗಧಾರಣೆ, ವಿಭೂತಿ, ರುದ್ರಾಕ್ಷಿ ಧಾರಣೆಗಳನ್ನು ಮರೆತುಬಿಟ್ಟಿದ್ದರು. ಈ ಅವಧಿಯಲ್ಲಿ ಅವತರಿಸಿ

ಬಂದವರು ಅಥಣಿಯ ಶಿವಯೋಗಿಗಳು, ಬಿಳ್ಳೂರು ಗುರುಬಸವಸ್ವಾಮಿಗಳು ಮುಂತಾದವರು. ಅವರು ವೀರಶೈವದ ಔನ್ನತ್ಯಕ್ಕೆ ಆದರ್ಶವಾಗಿ ನಿಂತಿದ್ದರು. ಈ ಆದರ್ಶವನ್ನು ಸಾಮಾಜಿಕ ಕ್ರಾಂತಿಯಲ್ಲಿ ಪರಿಣಮಿಸುವ ಧೀರನಾಯಕರು ಬೇಕಿದ್ದರು. ಇಂಥ ನಾಯಕತ್ವವನ್ನು ವಹಿಸುವುದು ಯುಗಪುರುಷರಿಗೆ ಮಾತ್ರ ಸಾಧ್ಯ. ಆ ಶಕ್ತಿ ಇಬ್ಬರು ವ್ಯಕ್ತಿಗಳಲ್ಲಿ ಗೋಚರವಾಯಿತು. ಒಬ್ಬರು ಹಾನಗಲ್ಲ ಕುಮಾರಸ್ವಾಮಿಗಳು, ಇನ್ನೊಬ್ಬರು ಧಾರವಾಡದ ಮೃತ್ಯುಂಜಯಸ್ವಾಮಿಗಳು.

ಮೃತ್ಯುಂಜಯಸ್ವಾಮಿಗಳ ಯುಗಪ್ರವರ್ತನ ಕಾರ್ಯ ಪ್ರಾರಂಭವಾದುದು ದಾವಣಗೇರಿಯಲ್ಲಿ. ಈಗ ವೀರಶೈವ ಧರ್ಮ ಹಾಗೂ ಸಮಾಜಗಳ ಏಳಿಗೆಯೇ ಶ್ರೀಗಳವರ ಮಣಿಹವಾಯಿತು. ಶರಣಸಂದೇಶ ಮತ್ತೊಮ್ಮೆ ಜನತೆಗೆ ಮುಟ್ಟಬೇಕು, ಅದರಿಂದ ಅವರು ಎಚ್ಚರಗೊಳ್ಳಬೇಕು, ಏಳಬೇಕು ಎಂಬುದು ಶ್ರೀಗಳವರ ಸಂಕಲ್ಪವಾಗಿದ್ದಿತು. ಮಂತ್ರಮೂರ್ತಿಯಾಗಿರುವ ಬಸವಣ್ಣನ ನಾಮಸ್ಮರಣೆಯೇ ಈ ಲೋಕಕ್ಕೆ ತಾರಕಮಂತ್ರವಾಗಬಲ್ಲದು ಎಂಬುದನ್ನು ಶ್ರೀಗಳು ಕಂಡುಕೊಂಡರು. ನಮ್ಮ ನಾಡಿನಲ್ಲಿ ಎಷ್ಟೋ ಜನ ಪೌರಾಣಿಕ ಹಾಗೂ ಕಾಲ್ಪನಿಕ ವ್ಯಕ್ತಿಗಳ ಜಯಂತ್ಯುತ್ಸವಗಳು, ಪುಣ್ಯತಿಥಿ ಸಮಾರಂಭಗಳು ವರುವರುಷ ನೆರವೇರುತ್ತಲೇ ಇರುತ್ತದೆ. ಆದರೆ ಬಸವಣ್ಣನವರಂತಹ ಚಾರಿತ್ರಿಕ ಮಹಾವ್ಯಕ್ತಿಯ ಹೆಸರನ್ನು ಅವರ ಅನುಯಾಯಿಗಳೇ ಮರೆತುಬಿಟ್ಟಿದ್ದರು. ಅವರ ಜಯಂತ್ಯುತ್ಸವದ ಮಾತು ದೂರ ಉಳಿಯಿತು. ಈಗ ಬಸವಜಯಂತಿಯನ್ನು ನಿಷ್ಕರ್ಷಮಾಡಿ ಅದನ್ನು ಸಮಾಜದಲ್ಲಿ ರೂಢಿಗೊಳಿಸಬೇಕೆಂದು ಮೃತ್ಯುಂಜಯ ಮಹಾಸ್ವಾಮಿಗಳು ಕಾರ್ಯಪ್ರವೃತ್ತರಾದರು. ಆಗ ತಾನೆ ಹರ್ಡೇಕರ ಮಂಜಪ್ಪನವರು ಸಮಾಜ ಸೇವೆಗೋಸುಗ ಶಿಕ್ಷಕವೃತ್ತಿಗೆ ರಾಜೀನಾಮೆ ನೀಡಿ, ದಾವಣಗೇರಿಗೆ ಬಂದಿದ್ದರು. ಆಜನ್ಮಬ್ರಹ್ಮಚಾರಿಗಳಾಗಿದ್ದ ಅವರು ನಾಡಿನ ಸ್ವಾತಂತ್ರ್ಯ, ಸಮಾಜದ ಏಳ್ಗೆಗಾಗಿ ತಮ್ಮನ್ನೇ ಅರ್ಪಣ ಮಾಡಿಕೊಂಡ ಮಹಾತ್ಮರು. ಕರ್ನಾಟಕದ ಗಾಂಧಿಯೆನಿಸಿದ ಮಂಜಪ್ಪನವರ, ಅಪಾರವಾದ ಆತ್ಮಶಕ್ತಿಯನ್ನು ಪಡೆದ ಮೃತ್ಯುಂಜಯಮಹಾಸ್ವಾಮಿಗಳ ಯೋಗ ಇಲ್ಲಿ ಘಟಿಸಿದುದು ಸಮಾಜದ ಸುಯೋಗ. ಮಂಜಪ್ಪನವರ ಸಹಾಯದಿಂದ ಮೃತ್ಯುಂಜಯಸ್ವಾಮಿಗಳು ಅಕ್ಷಯ ತೃತೀಯ 'ಬಸವ ಜಯಂತಿಯ

ದಿನ'ವೆಂದು ನಿಷ್ಕರ್ಷಿಸಿದರು. ಕ್ರಿ.ಶ. ೧೯೧೧ ರಂದು ಮೊಟ್ಟಮೊದಲ ಬಾರಿಗೆ ಅಕ್ಷಯ ತೃತೀಯೆಯ ದಿನ ದಾವಣಗೇರಿಯಲ್ಲಿ ಬಸವಜಯಂತಿಯನ್ನು ಆಚರಿಸಲಾಯಿತು. ಮೃತ್ಯುಂಜಯಸ್ವಾಮಿಗಳ ಸಂಕಲ್ಪದಲ್ಲಿ ದೈವೀಶಕ್ತಿ ಇದ್ದುದರಿಂದ ಅದು ಎಂದೂ ವಿಕಲ್ಪವಾಗಲಾರದು. ಒಂದು ವರ್ಷದಲ್ಲಿ ಬಸವಜಯಂತಿ ಉತ್ಸವಗಳು ಕನ್ನಡನಾಡಿನ ಹಳ್ಳಿಪಟ್ಟಣಗಳಲ್ಲಿ ನೆರವೇರಿ ನಾಡಿನಲ್ಲಿ ಜನಜಾಗೃತಿಯುಂಟಾಯಿತು. ೧೯೧೨ನೆಯ ಇಸ್ವಿಯಲ್ಲಿಯೇ ರಾಯಚೂರ ಜಿಲ್ಲೆಯ ಸಂಗನಾಳದಂತಹ ಒಂದು ಸಣ್ಣ ಗ್ರಾಮದಲ್ಲಿ ಬಸವಜಯಂತಿ ಕಾರ್ಯಕ್ರಮ ವೈಭವಪೂರ್ಣವಾಗಿ ನೆರವೇರಿದುದರ ಉಲ್ಲೇಖಗಳಿವೆ.ಇದರಿಂದ ಎಷ್ಟು ಶೀಘ್ರಗತಿಯಲ್ಲಿ ಮೃತ್ಯುಂಜಯಸ್ವಾಮಿಗಳ ವಿಚಾರಗಳು, ಕೈಕೊಂಡ ಕಾರ್ಯಗಳು ಜನತೆಯಲ್ಲಿ ಪ್ರತಿಫಲಿಸತೊಡಗಿದವು ಎಂಬುದು ಅರ್ಥವಾಗುತ್ತದೆ.

ಬಸವಜಯಂತಿಯನ್ನು ಆಚರಣೆಗೆ ತರುವುದರ ಉದ್ದೇಶ, ಶರಣಸಂದೇಶ ಜನತೆಗೆ ಮುಟ್ಟಬೇಕೆಂಬುದು. ಆದುದರಿಂದ ಬಸವಾದಿ ಪ್ರಮಥರ ವಚನಗಳನ್ನೂ ಹಾಡುಗಳನ್ನೂ ಜನತೆಯಲ್ಲಿ ಪ್ರಸಾರ ಮಾಡುವ ಕಾರ್ಯವನ್ನು ಮೃತ್ಯುಂಜಯಸ್ವಾಮಿಗಳು ಕೈಕೊಂಡರು. ಭಜನೆ, ಕೀರ್ತನೆ ಇವು ನಮ್ಮ ಪ್ರಾಚೀನ ಕಾಲದ ಸಮೂಹ ಮಾಧ್ಯಮಗಳು. ಮೃತ್ಯುಂಜಯ ಮಹಾಸ್ವಾಮಿಗಳು ಈ ಮಾಧ್ಯಮಗಳ ಮುಖಾಂತರ ಶರಣವಾಣಿಯನ್ನು ಜನತೆಗೆ ಕೇಳಿಸುವ ಉದ್ದೇಶದಿಂದ ಭಜನಾ ಮೇಳಗಳನ್ನು ಸ್ಥಾಪಿಸಿದರು. ಊರೂರಿಗೆ ಭಜನಾತಂಡಗಳು ಉದ್ಭವಿಸಿ, ಜನರು ಶರಣರ ಗೀತೆಗಳನ್ನು ಸುಶ್ರಾವ್ಯವಾಗಿ ಹಾಡತೊಡಗಿದರು. ದುಡಿದು ಬಂದು ಗುಡಿಯ ಕಟ್ಟೆಯ ಮೇಲೆಯೋ, ಮನೆಯ ಮುಂದೋ ಕುಳಿತು ವಿಶ್ರಾಂತಿ ಪಡೆಯುತ್ತಿರುವ ರೈತರ ಹೃದಯಗಳನ್ನು ಊರೊಳಗಿನ ಗುಡಿ, ಮಠಗಳಿಂದ ಕೇಳಿಬರುತ್ತಿದ್ದ ಭಜನಾ ಪದಗಳು ಪ್ರವೇಶಿಸತೊಡಗಿದವು. ಹೃದಯಸಂಸ್ಕಾರಕಾರ್ಯ ಹೀಗೆ ಪ್ರಾರಂಭವಾಯಿತು.

## ಪ್ರಭಾತಪೇರಿ

ಮೃತ್ಯುಂಜಯಸ್ವಾಮಿಗಳು ಇಷ್ಟಕ್ಕೇ ನಿಲ್ಲಲಿಲ್ಲ. ಆಗ ಸ್ವಾತಂತ್ರ್ಯದ ಹೋರಾಟ ಭರದಿಂದ ನಡೆದಿದ್ದಿತು. ಪ್ರಭಾತಪೇರಿಯ ಮೂಲಕ ಜನ

ರಾಷ್ಟ್ರಗೀತೆಗಳನ್ನು ಹಾಡುತ್ತ ಊರ ಬೀದಿಬೀದಿಗಳಲ್ಲಿ ಸಂಚರಿಸುತ್ತಿದ್ದರು. ಈ ಮಾದರಿಯಲ್ಲಿ ಬಸವ ಸಂದೇಶವನ್ನು ಸಾರಲು ಪ್ರಭಾತಪೇರಿ ಕಾರ್ಯವನ್ನು ಪ್ರಾರಂಭಿಸಿದರು. ಸ್ವತಃ ತಾವೇ ಬೆಳಗಿನ ಜಾವ ಕೈಯಲ್ಲಿ ತಂಬೂರಿ ಹಿಡಿದುಕೊಂಡು ನಾಲ್ಕಾರು ಜನ ಶಿಷ್ಯರೊಡನೆ ಪ್ರಭಾತಪೇರಿ ಹೊರಡುವರು. ಬೀದಿ ಬೀದಿಗಳಲ್ಲಿ ಸಂಚರಿಸುವರು. 'ಬಸವಾ ಮುಕ್ತಿದಾತಾ ಮಾದರಸಸುತಾ' ಎಂದು ಸುಶ್ರಾವ್ಯವಾಗಿ ಹಾಡಿದರೆ ಜನತೆಯನ್ನು ಬಡಿದೆಬ್ಬಿಸಿದಂತಾಗುತ್ತಿತ್ತು. ಸ್ವತಃ ಸ್ವಾಮಿಗಳೇ ಪಾಲುಗೊಂಡ ಇಂಥ ಪ್ರಭಾತಪೇರಿಗಳು ಹಾಗೂ ಭಜನಾ ಮೇಳಗಳು ಊರೂರಿಗೆ ಪ್ರಾರಂಭವಾದವು. ಇದರಿಂದ ವೀರಶೈವೇತರರಲ್ಲಿಯೂ ಹೊಸ ಸಂಸ್ಕಾರ ಉದಯವಾಯಿತು. ಒಂದು ಕಡೆಗೆ ನಾಡಿನ ಸ್ವಾತಂತ್ರ್ಯ, ಇನ್ನೊಂದು ಕಡೆಗೆ ಸಮಾಜೋದ್ಧಾರ ಕಾರ್ಯಗಳು ತೀವ್ರಗತಿಯಲ್ಲಿ ಮುಂದುವರಿದವು. ಸಮಾಜದ ಏಳ್ಗೆಯಾಗದೆ ನಾಡು ಉದ್ಧಾರವಾಗುವಂತಿಲ್ಲ. ಆದ್ದರಿಂದ ಸಮಾಜಕ್ಕಾಗಿ ದುಡಿಯುವುದು, ತ್ಯಾಗ ಮಾಡುವುದು ರಾಷ್ಟ್ರೀಯಭಾವನೆಗೆ ಪೋಷಕವಾಗಿದೆ. ಈ ಮಹತ್ವವನ್ನರಿತು ನಾಡಿನ ಭಿನ್ನಭಿನ್ನ ಸಮಾಜದ ಮಹಾವ್ಯಕ್ತಿಗಳು ಮೃತ್ಯುಂಜಯಸ್ವಾಮಿಗಳಲ್ಲಿಗೆ ಮೊದಲಿನಿಂದಲೂ ಬರುತ್ತ,ಅವರ ಆಶೀರ್ವಾದ ಪಡೆಯುತ್ತ ಹೋಗಿರುವರು. 'ಸ್ವಧರ್ಮನಿಷ್ಠೆ, ಪರಧರ್ಮ ಸಹಿಷ್ಣುತೆ' ಇದು ಮೃತ್ಯುಂಜಯ ಸ್ವಾಮಿಗಳ ಮಹಾಮಂತ್ರವಾಗಿದ್ದಿತು; ಈ ವಿಶಾಲಭಾವನೆಯಿಂದಲೇ ಅವರು ಸಾಮಾಜಿಕ ಕಾರ್ಯವನ್ನು ಕೈಕೊಂಡರು.

## ತರುಣ ಸಂಘಗಳು

ಇಂದಿನ ತರುಣರು ನಾಳಿನ ನಾಯಕರು. ಸಮಾಜದ ಮುಂದಿನ ಭವಿತವ್ಯವೆಲ್ಲ ತರುಣರನ್ನವಲಂಬಿಸಿರುತ್ತದೆ. ಕಾರಣ ತರುಣರನ್ನು ಎಚ್ಚರಿಸುವ, ಸಂಘಟಿಸುವ ಉದ್ದೇಶದಿಂದ ಶ್ರೀಗಳವರು ಅನೇಕ ಊರುಗಳಲ್ಲಿ ವೀರಶೈವ ತರುಣಸಂಘಗಳನ್ನು ಸ್ಥಾಪಿಸಿದರು. ವಾಚನಾಲಯ, ಗ್ರಂಥ ಪ್ರಕಟನೆ, ಬಸವಜಯಂತಿ, ಶರಣಧರ್ಮ ಪ್ರಸಾರ ಈ ಕಾರ್ಯಗಳೆಲ್ಲ ತರುಣ ಸಂಘಗಳ ಕರ್ತವ್ಯಗಳಾದವು. ತರುಣರ ಸಂಘಟನೆಯಿಂದ ಸಮಾಜಕ್ಕೆ ಒಂದು ಹೊಸ ಕಳೆ ಬಂದಿತು. ಸಮಾಜದ ಗಣ್ಯರನ್ನು, ಪಂಡಿತರನ್ನು ಬೇರೆ ಬೇರೆ

ಪ್ರಸಂಗಗಳಲ್ಲಿ ಆಹ್ವಾನಿಸಿ, ಅವರ ಉಪನ್ಯಾಸಗಳನ್ನೇರ್ಪಡಿಸುವುದರ ಮೂಲಕ ಸಮಾಜದಲ್ಲಿ ಹೊಸ ವಿಚಾರಗಳ ಕಲ್ಪನೆ ಮೂಡಿಬಂದಿತು.

ಸಮಾಜದ ಏಳ್ಗೆಗೆ ಶಿಕ್ಷಣವೇ ತಾರಕವೆಂದು ಮೃತ್ಯುಂಜಯ ಸ್ವಾಮಿಗಳಿಗೆ ಹೊಳೆಯಿತು. ಆಂಗ್ಲ ವಿದ್ಯಾಭ್ಯಾಸದಲ್ಲಿ ನಮ್ಮ ಜನ, ಅದರಲ್ಲಿಯೂ ಹಳ್ಳಿಯ ಜನ ಮುಂದುವರಿಯದೆ ಸಮಾಜದ ಏಳ್ಗೆ ಆಗಲಾರದು ಎಂಬುದನ್ನು ಸ್ವಾಮಿಗಳು ಅರಿತುಕೊಂಡುದು ಒಂದು ಸಮಯೋಚಿತ ವಿಚಾರ. ಆಗ ಸ್ವಾಮಿಗಳಾಗಿದ್ದವರ ಚಿತ್ತ ಕೇವಲ ಸಂಸ್ಕೃತ ಪಾಠಶಾಲೆಗಳಿಗೆ ಮಾತ್ರ ಸೀಮಿತವಾಗಿರುತ್ತಿತ್ತು. ಮೃತ್ಯುಂಜಯ ಸ್ವಾಮಿಗಳು ಮೊಟ್ಟಮೊದಲಿಗೆ ವೀರಶೈವ ಜನತೆಯನ್ನು ಆಂಗ್ಲ ವಿದ್ಯಾಭ್ಯಾಸದತ್ತ ಮನವೊಲಿಸತೊಡಗಿದರು. ಗ್ರಾಮಗಳಲ್ಲಿಯೇ ಹೆಚ್ಚಾಗಿ ವಾಸಿಸುವ ವೀರಶೈವರಿಗಿದ್ದ ಆರ್ಥಿಕ ತೊಂದರೆಯ ಕಲ್ಪನೆ ಶ್ರೀಗಳವರಿಗೆ ಆದುದು ಒಂದು ಸುಯೋಗ. ಇವರ ಸಹಾಯಾರ್ಥವಾಗಿ ಪ್ರಸಾದನಿಲಯ, ಹಾಗೂ ಶಿಷ್ಯವೇತನಗಳನ್ನು ಪ್ರಾರಂಭಿಸಬೇಕೆಂದು ದಾವಣಗೇರಿಯಲ್ಲಿಯೇ ಕಾರ್ಯಪ್ರವೃತ್ತರಾದರು. ತಮ್ಮ ಮಠದಲ್ಲಿಯೇ ಜಯದೇವ ಜಗದ್ಗುರುಗಳ ಹೆಸರಿನಲ್ಲಿ ಒಂದು ಉಚಿತ ಪ್ರಸಾದನಿಲಯವನ್ನು ಸ್ಥಾಪಿಸಿದರು. ಅವರು ಸ್ಥಾಪನೆ ಮಾಡಿದ ಮೇಲೆ ಅದು 'ವೀರಶೈವ ಸ್ವಾಮಿಗಳ ಒಂದು ಕರ್ತವ್ಯ' ಎನ್ನುವಷ್ಟರ ಮಟ್ಟಿಗೆ ವ್ಯಾಪಕವಾಗಿ ಪ್ರಚುರಗೊಂಡಿತು. ದಾವಣಗೇರಿಯ ಪ್ರಸಾದನಿಲಯಕ್ಕೆ ವೀರಶೈವ ಭಕ್ತರು, ವರ್ತಕರು ಒಂದು ಚೀಲಕ್ಕೆ ಒಂದು ಮುಷ್ಟಿಯಂತೆ ಧಾನ್ಯವನ್ನು ದಾನಮಾಡಬೇಕೆಂದು ಒಪ್ಪಿಗೆಯಾಯಿತು. ಮೃತ್ಯುಂಜಯ ಮಹಾಸ್ವಾಮಿಗಳ ದೈವೀವ್ಯಕ್ತಿತ್ವದ ಪ್ರಭಾವ ಜನತೆಯ ಮೇಲೆ ಸಂಪೂರ್ಣ ಆಗಿದ್ದುದರಿಂದ ಅವರ ವಿಚಾರಗಳನ್ನು ಎಲ್ಲರೂ ಭಕ್ತಿಪೂರ್ವಕ ಒಪ್ಪಿಕೊಳ್ಳುತ್ತಿದ್ದರು ; ಆಚರಿಸುತ್ತಿದ್ದರು. ಹೀಗಿದ್ದುದರಿಂದ ವರ್ತಕರು ಅತ್ಯಂತ ಪ್ರಾಮಾಣಿಕತನದಿಂದ ತಮ್ಮ ತಮ್ಮ ಅಂಗಡಿಗಳಲ್ಲಿ ಶೇಖರಣೆಗೊಂಡ ಧಾನ್ಯವನ್ನು ತಂದು ಪ್ರಸಾದನಿಲಯಕ್ಕೆ ಅರ್ಪಿಸುತ್ತಿದ್ದರು. ಅದರ ಸದ್ವಿನಿಯೋಗವಾಗುತ್ತಿದ್ದುದನ್ನು ಅವರು ದಿನದಿನವೂ ಕಣ್ಣಾರೆ ಕಾಣುತ್ತಿದ್ದರು. ಹಳ್ಳಿಹಳ್ಳಿಗಳಿಂದ ಬಡವಿದ್ಯಾರ್ಥಿಗಳು ಬಂದು ಪ್ರಸಾದನಿಲಯದಲ್ಲಿ ಉಳಿದು, ಶಾಲೆ–ಕಾಲೇಜುಗಳಲ್ಲಿ ಅಧ್ಯಯನ ಮಾಡುತ್ತಿದ್ದರು.

## ವೀರಶೈವ ವಿದ್ಯಾವರ್ಧಕ ಫಂಡು

ವಿದ್ಯಾರ್ಥಿಗಳಿಗೆ ಕೇವಲ ಪ್ರಸಾದವನ್ನು ಕೊಟ್ಟರೆ ಸಾಲದು, ಅವರಿಗೆ ಬಟ್ಟೆ, ಪುಸ್ತಕಗಳ ವ್ಯವಸ್ಥೆ ಮಾಡಬೇಕು ; ಶಾಲೆಯ ಫೀ ಕೊಡಬೇಕು. ಇವುಗಳಲ್ಲಿ ಯಾವುದನ್ನು ಪೂರೈಸಲೂ ಬಡ ತಂದೆತಾಯಿಗಳಿಗೆ ಸಾಧ್ಯವಿರಲಿಲ್ಲ. ದಿನದ ಕೂಲಿಯಿಂದ ಹೊಟ್ಟೆ ತುಂಬುವುದೇ ಸಾಧ್ಯವಿರದಾಗ ಮಕ್ಕಳಿಗೆ ಎಲ್ಲಿಂದ ಹಣ ಪೂರೈಸಬಲ್ಲರು ? ಅತ್ಯಂತ ಸಂವೇದನಾಶೀಲರಾದ ಮೃತ್ಯುಂಜಯ ಸ್ವಾಮಿಗಳಿಗೆ ಇದು ಥಟ್ಟನೆ ಹೊಳೆಯಿತು. ಶಿಷ್ಯವೇತನದ ವ್ಯವಸ್ಥೆ ಮಾಡಿ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಅವುಗಳನ್ನು ನೀಡಬೇಕೆಂದು ಕಾರ್ಯಪ್ರವೃತ್ತರಾದರು. ವೀರಶೈವ ವಿದ್ಯಾವರ್ಧಕ ಫಂಡನ್ನು ಸ್ಥಾಪಿಸಿದರು. ಅದಕ್ಕಾಗಿ ಎಂಟುಸಾವಿರ ರೂಪಾಯಿಗಳ ನಿಧಿ ಸಂಗ್ರಹವಾಯಿತು. ಹೀಗೆ ನಾನಾ ಮುಖವಾಗಿ ಶಿಕ್ಷಣದ ಕಾರ್ಯಕ್ಕೆ ಶ್ರೀಗಳು ಸಹಾಯಮಾಡುತ್ತ ನಡೆದರು. ಪ್ರಸಾದನಿಲಯದ ವಿದ್ಯಾರ್ಥಿಗಳು ಹೊರಗೆ ಆಂಗ್ಲವಿದ್ಯಾಭ್ಯಾಸ ಮಾಡುತ್ತಿದ್ದರೂ ಅವರಿಗೆ ನಮ್ಮ ಸಂಸ್ಕೃತಿಯ ಪರಿವೆ, ಪರಿಜ್ಞಾನ ಇರುವುದು ಅವಶ್ಯವೆಂದು ಪ್ರಸಾದನಿಲಯದಲ್ಲಿ ಧಾರ್ಮಿಕ ಹಾಗೂ ನೈತಿಕ ಶಿಕ್ಷಣಪ್ರಸಾರ ನಡೆಯಿತು. ನಿಜಗುಣಶಿವಯೋಗಿಗಳು, ಸರ್ಪಭೂಷಣಶಿವಯೋಗಿಗಳು, ಮುಪ್ಪಿನಷಡಕ್ಷರಿ ಮುಂತಾದವರ ಹಾಡುಗಳನ್ನು ಸ್ವತಃ ಶ್ರೀಗಳೇ ಹೇಳುತ್ತಿದ್ದರು. ವಿದ್ಯಾರ್ಥಿಗಳು ಅವರನ್ನು ಅನುಸರಿಸತೊಡಗಿದರು. ಅವರ ಅನುಕೂಲಕ್ಕಾಗಿ ಬಸವಾದಿ ಪ್ರಮಥರ ವಚನಗಳನ್ನೊಳಗೊಂಡ ಜೀವನ ಚರಿತ್ರೆಗಳು ಸುಲಭ ಬೆಲೆಯಲ್ಲಿ ಪ್ರಕಟಗೊಂಡವು. ವಿದ್ಯಾರ್ಥಿಗಳು ಶರಣರ ಜೀವನ ಚರಿತ್ರೆಗಳನ್ನು ಅರಿತುಕೊಳ್ಳತೊಡಗಿದರು. ವಚನಗಳನ್ನು ಹಾಡತೊಡಗಿದರು. ಹೀಗೆ ಧಾರ್ಮಿಕ, ನೈತಿಕ ಪ್ರಸರಣಕಾರ್ಯ ಮುಂದುವರೆಯಿತು. ದಾವಣಗೇರಿಯ ಸುತ್ತುಮುತ್ತಲಿನ ಪ್ರದೇಶವೆಲ್ಲ ಧಾರ್ಮಿಕ ಜಾಗೃತಿ, ಸಾಮಾಜಿಕ ಸುಧಾರಣೆ, ವಿದ್ಯಾಪ್ರಸರಣ ಕಾರ್ಯಗಳಿಗೆ ಹೆಸರಾಯಿತು. ಹತ್ತು ವರ್ಷಗಳ ಅವಧಿಯಲ್ಲಿ ಶ್ರೀಗಳವರ ನಿರಂತರ ಪರಿಶ್ರಮದ ಫಲವಾಗಿ ದಾವಣಗೇರಿ ಒಂದು ದೊಡ್ಡ ಧಾರ್ಮಿಕ ಜಾಗೃತಿಯ ಕೇಂದ್ರವಾಯಿತು. ಮೃತ್ಯುಂಜಯ ಸ್ವಾಮಿಗಳು ಧರ್ಮ, ಶಿಕ್ಷಣ, ಸಂಸ್ಕೃತಿಗಳ ರಕ್ಷಕರಾದರು ; ಪೋಷಕರಾದರು, ನೂತನ ಯುಗಪ್ರವರ್ತಕರಾದರು.

## ಮುಳಗುಂದದತ್ತ

ಮುಳಗುಂದ ಶ್ರೀ ಬಾಲಲೀಲಾ ಮಹಾಂತಶಿವಯೋಗಿಗಳ ಪುಣ್ಯಕ್ಷೇತ್ರ. ಆ ಮಠಕ್ಕೆ ಸ್ವಾಮಿಗಳ ನೇಮಕವಾಗಬೇಕಿತ್ತು. ಮೃತ್ಯುಂಜಯಸ್ವಾಮಿಗಳ ಕರ್ತೃತ್ವಶಕ್ತಿ, ಸಮಾಜನಿಷ್ಠೆ, ಸೇವಾಭಾವ ಇವು ಜಯದೇವ ಜಗದ್ಗುರುಗಳ ಮೆಚ್ಚುಗೆಯನ್ನು ಪಡೆದಿದ್ದವು. 'ನಮ್ಮ ಕಲ್ಪನೆಗೆ ಮೀರಿ ಮೃತ್ಯುಂಜಯಸ್ವಾಮಿಗಳು ದಾವಣಗೇರಿಯಲ್ಲಿ ಕಾರ್ಯ ಮಾಡಿದ್ದಾರೆ. ಸಮಾಜದಲ್ಲಿ ಜಾಗೃತಿಯನ್ನುಂಟುಮಾಡಿದ್ದಾರೆ' ಎಂದು ಅನೇಕಸಲ ಜಗದ್ಗುರುಗಳು ಹೇಳುತ್ತಿದ್ದರು. ದಾವಣಗೇರಿಯ ಮಠದ ಜೊತೆಗೆ ಮುಳಗುಂದಮಠವನ್ನೂ ನೋಡಿಕೊಳ್ಳಬೇಕೆಂದು ಮೃತ್ಯುಂಜಯಸ್ವಾಮಿಗಳಿಗೆ ಅಧಿಕಾರವಹಿಸಿಕೊಟ್ಟರು. ಹೀಗಾಗಿ ಮುಳಗುಂದದ ಮಠಾಧೀಶರೂ ಆಗುವ ಭಾಗ್ಯ ಮೃತ್ಯುಂಜಯಸ್ವಾಮಿಗಳ ಪಾಲಿಗೆ ಬಂದಿತ್ತು. ಅಲ್ಲಿಯೂ ಅತ್ಯಂತ ನಿಷ್ಠೆಯಿಂದ ಕಾರ್ಯನಿರ್ವಹಿಸಿದರು. ದಾವಣಗೇರಿಯಲ್ಲಿ ಪ್ರಾರಂಭಿಸಿದ್ದ ಎಲ್ಲ ಧಾರ್ಮಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಕಾರ್ಯಕ್ರಮಗಳನ್ನು ಮುಳಗುಂದದಲ್ಲಿ ಮುಂದುವರಿಸಿದರು. ಭಜನಾಮೇಳ, ವೀರಶೈವ ತರುಣಸಂಘ, ವಿದ್ಯಾವರ್ಧಕ ಫಂಡು ಇವೆಲ್ಲವೂ ಅಲ್ಲಿ ಮೂರ್ತಗೊಂಡವು. ದಾವಣಗೇರಿ ಶ್ರೀಮಂತರ ಊರು, ಅಲ್ಲಿಯ ಜನ ಇವೆಲ್ಲ ಬೆಳೆದು ಬರುವಂತೆ ನೆರವಾಗಿರಬೇಕು. ಆದರೆ ಮುಳಗುಂದದಂತಹ ಗ್ರಾಮಾಂತರ ಪ್ರದೇಶದಲ್ಲಿಯೂ ಈ ಕಾರ್ಯಗಳನ್ನು ಮೃತ್ಯುಂಜಯ ಸ್ವಾಮಿಗಳು ಅತ್ಯಂತ ಯಶಸ್ವಿಯಾಗಿ ಮಾಡಿತೋರಿಸಿದುದು ಅವರ ಕರ್ತೃತ್ವಶಕ್ತಿಯ ಕುರುಹು. ಮಠದ ಆವರಣದಲ್ಲಿಯೇ ಹೈಸ್ಕೂಲನ್ನು ಪ್ರಾರಂಭಿಸಿದರು. ಅಲ್ಲಿಯೂ ಬಡ ವಿದ್ಯಾರ್ಥಿಗಳಿಗೆ ಪ್ರಸಾದದ ವ್ಯವಸ್ಥೆ ಮಾಡಿಕೊಟ್ಟರು. ಅನೇಕ ಮಹನೀಯರನ್ನು ಆಹ್ವಾನಿಸಿ, ಉಪನ್ಯಾಸಗಳನ್ನೇರ್ಪಡಿಸಿದರು. ಹರ್ಡೇಕರ ಮಂಜಪ್ಪನವರ ನೆರವು ಶ್ರೀಗಳವರಿಗೆ ಮುಳಗುಂದದಲ್ಲಿಯೂ ದೊರೆಯಿತು. ಈ ಧಾರ್ಮಿಕ ಸಾಮಾಜಿಕ ಕಾರ್ಯಗಳಿಂದ ಸುತ್ತಮುತ್ತಲಿನ ಹಳ್ಳಿಯ ಜನರ ಮೇಲೆ ಒಳ್ಳೆಯ ಪರಿಣಾಮ ಉಂಟಾಯಿತು. ಧಾರ್ಮಿಕ ಭಾವನೆಗಳು ಮತ್ತೆ ಕುದುರತೊಡಗಿದವು. ಬಾಲಲೀಲಾ ಮಹಾಂತಶಿವಯೋಗಿಗಳೇ ಮತ್ತೆ ಅವತರಿಸಿ ಬಂದಿರುವರೆಂಬ ಭಾವನೆ ಜನರಲ್ಲಿ ಉಂಟಾಯಿತು. 'ಶರಣರು

ನಿಂದ ನೆಲವೇ ಪಾವನಕ್ಷೇತ್ರ' ಎಂಬ ನುಡಿಯೊಂದುಂಟು. ಮೃತ್ಯುಂಜಯ ಸ್ವಾಮಿಗಳು ಎಲ್ಲಿ ಹೋಗಿ ನಿಂತರೂ ಅದು ಭೂಕೈಲಾಸವಾಗುತ್ತಿತ್ತು. ಅಥವಾ ಅದನ್ನು ಭೂಕೈಲಾಸವನ್ನಾಗಿ ಪರಿವರ್ತಿಸುವ ಶಕ್ತಿ ಅವರಲ್ಲಿತ್ತು. ತಮ್ಮ ಅಪಾರ ಅಂತಃಕರಣ, ಶ್ರದ್ಧೆ-ವಿಶ್ವಾಸಗಳಿಂದ ಜನರ ಮನಸ್ಸನ್ನು ಸೂರೆಗೊಳ್ಳುತ್ತಿರುವ ಶಕ್ತಿ ಅವರಲ್ಲಿತ್ತು. ಹೀಗೆ ಮುಳಗುಂದದ ವಿರಕ್ತಮಠವನ್ನು ಉದ್ಧರಿಸುವ ಭಾಗ್ಯ ಮೃತ್ಯುಂಜಯ ಅಪ್ಪಗಳ ಪಾಲಿಗೆ ಬಂದಿತು.

## ಧಾರವಾಡದವರು ಧಾರವಾಡಕ್ಕೆ

ಮೃತ್ಯುಂಜಯಸ್ವಾಮಿಗಳು ಇಂಗಳಹಳ್ಳಿಯವರೆಂಬ ಭಾವನೆ ಬಹುಜನರಲ್ಲಿ ಬೇರೂರಿದೆ. ಆದರೆ ಅವರು ಧಾರವಾಡದವರೆಂಬುದು ಐತಿಹಾಸಿಕ ಸತ್ಯ. ಅವರ ಪೂರ್ವಾಶ್ರಮದ ತಂದೆಯವರಾದ ಕಾಂತೆಯ್ಯನವರು, ಅಜ್ಜನವರಾದ ಚರಲಿಂಗಯ್ಯನವರು ಧಾರವಾಡದ ತರಬೇತಿಮಠದವರು. ಇವರಿಬ್ಬರ ಧರ್ಮಪತ್ನಿಯರು ಇಂಗಳಹಳ್ಳಿಯವರಾದುದರಿಂದ ಅಲ್ಲಿ ಹೆಚ್ಚುಕಾಲ ಮೃತ್ಯುಂಜಯ ಸ್ವಾಮಿಗಳು ಬಾಲ್ಯದಲ್ಲಿ ಇರಬೇಕಾಗಿ ಬಂದಿತು. ಆಗಲೂ ಧಾರವಾಡದ ತರಬೇತಿಮಠಕ್ಕೂ, ಹೂಲಿಮಠಕ್ಕೂ ಬಂದು ಸಂಸ್ಕೃತ ಕಲಿಯುತ್ತಿದ್ದರು. ಈಗ ಮೂಲತಃ ಧಾರವಾಡದವರಾದ ಅವರನ್ನು ದೈವ ಮತ್ತೆ ಧಾರವಾಡಕ್ಕೆ ತಂದಿತು.

ಧಾರವಾಡದಲ್ಲಿ ಹಾವೇರಿಪೇಟೆಯೊಳಗೆ ಮೂರಂಕಣದ ಒಂದು ಮಠವಿತ್ತು. ಈ ಹಾವೇರಿಪೇಟೆ ಧಾರವಾಡದ ಟ್ರೆಜರಿಯನ್ನು ಪಡೆದಿದ್ದರೂ ಅಲ್ಲಿಯ ಭಕ್ತಾದಿಗಳು ಧಾರ್ಮಿಕ ಟ್ರೆಜರಿಯಾದ ಈ ಮುರುಘಾಮಠದ ಕಡೆಗೆ ಲಕ್ಷ್ಯಕೊಟ್ಟಿರಲಿಲ್ಲ. ಮಠದ ಸುತ್ತೆಲ್ಲ ಮುಳ್ಳುಕಂಟಿಗಳು ಬೆಳೆದಿದ್ದವು. ಇದ್ದ ನಾಲ್ಕು ಗೋಡೆಗಳೂ ಅಲ್ಲಲ್ಲಿ ಬೀಳತೊಡಗಿದ್ದವು. ಮಾಳಿಗೆ ಸೋರುತ್ತಿತ್ತು. ಇಂಥ ಜೀರ್ಣಸ್ಥಿತಿಯಲ್ಲಿತ್ತು, ಮುರುಘಾಮಠ. ಹಾವೇರಿಪೇಟೆಯಾದರೂ ಬಣಬಣಗಳ ಈರ್ಷೆ-ತಿಕ್ಕಾಟಗಳ, ಕೊಲೆ-ಸುಲಿಗೆಗಳ ತವರಾಗಿತ್ತು. ಭಕ್ತಿಯೆಂಬುದನ್ನು ಅಲ್ಲಿ ಹಗಲು ದೀಪಹಚ್ಚಿ

ಹುಡುಕಿದರೂ ಕಾಣುವಂತಿರಲಿಲ್ಲ. ಆದರೂ ಕತ್ತಲೆಯ ಗರ್ಭದಲ್ಲಿ ಒಮ್ಮೊಮ್ಮೆ ಬೆಳಕು ಪ್ರಕಟವಾಗುವಂತೆ ಧಾರವಾಡದ ಕೆಲವು ಹಿರಿಯರಿಗೆ ಈ ಮಠಕ್ಕೊಬ್ಬ ಸ್ವಾಮಿಗಳನ್ನು ತರಬೇಕೆಂಬ ವಿಚಾರ ಮೂಡಿತು. ಅದು ಚಿತ್ರದುರ್ಗದ ಶಾಖಾಮಠವಾದುದರಿಂದ ಜಯದೇವ ಜಗದ್ಗುರುಗಳಲ್ಲಿ ಅವರು ತಮ್ಮ ಬಿನ್ನಹವನ್ನು ಮಂಡಿಸಿದರು. ಮತ್ತೆ ಜಗದ್ಗುರುಗಳ ಮನಸ್ಸಿನಲ್ಲಿ ಮೃತ್ಯುಂಜಯಪ್ಪಗಳೇ ಬಂದರು. ಯಾವ ಪುಣ್ಯ ವಿಶೇಷವೋ ಏನೋ ಮೃತ್ಯುಂಜಯ ಅಪ್ಪಗಳೇ ಧಾರವಾಡಮಠದ ಅಧಿಕಾರ ವಹಿಸಿಕೊಳ್ಳಬೇಕೆಂದು ಜಗದ್ಗುರುಗಳ ಅಪ್ಪಣೆಯಾಯಿತು. ಅಥಣಿ ಶಿವಯೋಗೀಶ್ವರರ ಆಶೀರ್ವಾದವೂ ಪ್ರಾಪ್ತವಾಯಿತು. 'ನಿನ್ನ ರಥಕ್ಕೆ ಹೊಸ ಪಥ ಸಿದ್ಧವಾಗಿದೆ, ಧಾರವಾಡಕ್ಕೆ ಹೋಗು' ಎಂದು ಶಿವಯೋಗಿಗಳು ಆಶೀರ್ವದಿಸಿದರು. ದಾವಣಗೇರಿ ಮುಳಗುಂದಗಳೆರಡನ್ನೂ ಬಿಟ್ಟು ಕ್ರಿ. ಶ. ೧೯೧೬ರಲ್ಲಿ ಧಾರವಾಡಕ್ಕೆ ಬಂದರು. ೧೧-೧೦-೧೯೧೬ರಂದು ಪಟ್ಟಾಭಿಷೇಕ ಜರುಗಿತು. ಮೂಲೆಮೂಲೆಗಳಿಂದ ಜನಸ್ತೋಮ ಹರಿದುಬಂದಿತ್ತು. ಧಾರವಾಡಕ್ಕೆ ನವಚೈತನ್ಯ ಪ್ರಾಪ್ತವಾಯಿತು. ಜಯದೇವ ಜಗದ್ಗುರುಗಳು ಈ ಸಮಾರಂಭಕ್ಕೆ ಪ್ರತ್ಯಕ್ಷವಾಗಿ ಆಗಮಿಸಿ ಆಶೀರ್ವದಿಸಿದರು.

ಸಾಮಾನ್ಯವಾಗಿ ಸ್ವಾಮಿಗಳು ಯಾವುದೇ ಮಠದ ಅಧಿಕಾರ ವಹಿಸಿಕೊಳ್ಳಬೇಕಾದರೆ ಅದರ ಆಸ್ತಿ, ಸೊತ್ತು ಮುಂತಾದವುಗಳನ್ನು ನೋಡುವುದುಂಟು. ಇದು ಲೌಕಿಕದ ಕಡೆಗೆ ಒಲವಿದ್ದವರ ಮಾತು. ಮೃತ್ಯುಂಜಯ ಸ್ವಾಮಿಗಳ ವಿಷಯವೇ ಬೇರೆ. ಅವರಿಗೆ ಆಸ್ತಿಯಲ್ಲಿ ನಂಬಿಕೆಯೇ ಇರಲಿಲ್ಲ. ಹಣದ ಮಾತು ದೂರ ಉಳಿಯಿತು. ಅದನ್ನು ಚೇಳು ಎಂದೇ ಅವರು ಭಾವಿಸುತ್ತಿದ್ದರು. ಡಬ್ಬಗಳ್ಳಿ, ಮುಳ್ಳು ಕಂಟಿಗಳಿಂದ ತುಂಬಿ ಕ್ರಿಮಿಕೀಟಾದಿಗಳಿಗೆ ಆಗರವಾಗಿ,ಜನ ಹೋಗಲು ಭಯಪಡುವಂತಹ ಮೂರಂಕಣದ ಜೀರ್ಣಮಠದ ಆಧಿಪತ್ಯವನ್ನು ಮೃತ್ಯುಂಜಯಸ್ವಾಮಿಗಳು ಸ್ವೀಕರಿಸಿದರು. ದಾವಣಗೇರಿಯಲ್ಲಿ ವೈಭವದ ಶಿಖರಕ್ಕೇರಿದ ವಿರಕ್ತಮಠದ ಆಧಿಪತ್ಯವನ್ನು ಬಿಟ್ಟು ಈ ಹಾಳುಕೊಂಪೆಗೆ ಬಂದುದು ಒಂದು ವಿಶೇಷ. ಸಮಾಜದ ಸೇವೆ ಮಾಡತಕ್ಕವನು ಎಲ್ಲಿದ್ದರೂ ತನ್ನ ಕಾರ್ಯವನ್ನು ಮುಂದುವರಿಸಬಲ್ಲ. ಸಿಂಹಾಸನ, ಅಡ್ಡಪಲ್ಲಕ್ಕಿ ಇತ್ಯಾದಿಗಳ ಹಂಬಲವಿದ್ದವರಿಗೆ ಮಾತ್ರ ದೊಡ್ಡಮಠ, ದೊಡ್ಡ ಆಸ್ತಿಗಳು ಬೇಕು. ಮೃತ್ಯುಂಜಯ ಸ್ವಾಮಿಗಳಿಗೆ ಇದಾವುದರಲ್ಲಿಯೂ ಆಸ್ಥೆ ಇಲ್ಲದುದರಿಂದ ಬಂದುದನ್ನು

ನಿಜಶರಣನಾಗಿ ಸ್ವೀಕರಿಸಿದರು. ಬೇಕು ಬೇಡೆಂಬೆರೆಡು ಬೀಜಗಳನ್ನು ಹುರಿದವರಿಗೆ ಇದು ಸಹಜಪ್ರವೃತ್ತಿ.

## ಪ್ರಸಾದನಿಲಯ–ಶಿಕ್ಷಣವಲಯ

ದೈವಲೀಲೆ. ಕಾಲಗರ್ಭದಲ್ಲಿ ಹುದುಗಿದ ರಹಸ್ಯ ಯಾರಿಗೂ ಗೋಚರವಾಗುವುದಿಲ್ಲ. ಕಾಲದ ಸುರುಳಿ ಬಿಚ್ಚಿದಂತೆ ಅವು ಒಂದೊಂದೇ ಪ್ರಕಟವಾಗುತ್ತ ಹೋಗುತ್ತವೆ. ಧಾರವಾಡವು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿಯಾಗಬೇಕಿತ್ತು. ವೀರಶೈವದ ಚಟುವಟಿಕೆಗಳಿಗೆ ಆಗರವಾಗಬೇಕಿತ್ತು. ಸಮಾಜಕಾರ್ಯ ದುರಂಧರರೂ ದೊಡ್ಡ ಅಧಿಕಾರಿಗಳೂ ಆಗಿದ್ದ ಅರಟಾಳ ರುದ್ರಗೌಡರು ವೀರಶೈವ ಸಮಾಜದ ಪರವಾಗಿ ಒಂದು ಲಕ್ಷ ರೂಪಾಯಿ ನಿಧಿಯನ್ನಲ್ಲದೆ, ರೊದ್ದ ಶ್ರೀನಿವಾಸರಾಯರು ಕೂಡಿಸಿಕೊಡಬೇಕಾದ್ದ ಇನ್ನೊಂದು ಲಕ್ಷರೂಪಾಯಿ ನಿಧಿಗೆ ಕಡಿಮೆ ಬಿದ್ದ ಹಣವನ್ನೂ ಸರಕಾರಕ್ಕೆ ಕೂಡಿಸಿಕೊಟ್ಟು ೧೯೧೭ರಲ್ಲಿ ಕರ್ನಾಟಕ ಕಾಲೇಜು ಅಸ್ತಿತ್ವಕ್ಕೆ ಬರುವಂತೆ ಮಾಡಿದರು. ಈ ಕಾಲೇಜಿನಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳು ಯಾರು ? ಬಡಬಗ್ಗರು ಏನುಮಾಡಬೇಕು ? ಇವೆಲ್ಲ ವಿಚಾರಾರ್ಹ ಪ್ರಶ್ನೆಗಳಾಗಿದ್ದವು. ಕಾಲೇಜು ಸ್ಥಾಪಿತವಾಗುವ ಒಂದು ವರ್ಷ ಪೂರ್ವದಲ್ಲಿಯೇ ಧಾರವಾಡಕ್ಕೆ ಬಂದಿದ್ದ ಮೃತ್ಯುಂಜಯಸ್ವಾಮಿಗಳು ಈ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಅರ್ಥಮಾಡಿಕೊಂಡರು. ವೀರಶೈವ ಸಮಾಜದಲ್ಲಿ ಜಾಗೃತಿ ಉಂಟಾಗಬೇಕಾದರೆ ಪಾಶ್ಚಾತ್ಯ ಶಿಕ್ಷಣ ಅವಶ್ಯವೆಂಬುದನ್ನು ಸಮಾಜದ ಮುಖಂಡರು ಈಗಾಗಲೇ ಕಂಡುಕೊಂಡುದರ ಫಲವಾಗಿ ಧಾರವಾಡದಲ್ಲಿ ೧೯೧೭ರಲ್ಲಿ ಕರ್ನಾಟಕ ಕಾಲೇಜು ಸ್ಥಾಪನೆಯಾದರೆ, ಬೆಳಗಾವಿಯಲ್ಲಿ ೧೯೧೬ರಲ್ಲಿ ಕೆ.ಎಲ್.ಇ. ಸೊಸಾಯಿಟಿ ಸ್ಥಾಪನೆಗೊಂಡು ಅದರ ಆಶ್ರಯದಲ್ಲಿ ಗಿಲಗಂಚಿ ಅರಟಾಳ ಹೈಸ್ಕೂಲು ಮೈದೋರಿತು. ಇದೇ ಅವಧಿಯಲ್ಲಿ ವಿಜಾಪುರ, ಬಾಗಲಕೋಟೆಗಳಲ್ಲಿಯೂ ವೀರಶೈವರು ಹೈಸ್ಕೂಲುಗಳನ್ನು ಸ್ಥಾಪಿಸಲು ಮುಂದೆ ಬಂದರು. ಈ ಹಿನ್ನೆಲೆಯಲ್ಲಿ ಮೃತ್ಯುಂಜಯ ಸ್ವಾಮಿಗಳು ಧಾರವಾಡಕ್ಕೆ ಬಂದುದನ್ನು ನೋಡಿದರೆ ಒಂದು ದೊಡ್ಡ ಮಣಿಹ ಅವರಿಗಾಗಿ ಕಾಯ್ದಿತ್ತೆಂಬುದು

ಸ್ಪಷ್ಟವಾಗುತ್ತದೆ. ದಾವಣಗೇರಿಯಲ್ಲಿ ಕೈಕೊಂಡ ಕಾರ್ಯವನ್ನು ನೂರುಮಡಿ ಹಿಗ್ಗಿಸುವ ಸಂಕಲ್ಪವನ್ನು ಶ್ರೀಗಳು ಮಾಡಿದರು. ಬಡವಿದ್ಯಾರ್ಥಿಗಳ ಅಭ್ಯಾಸಕ್ಕೆ ಅನುಕೂಲವಾಗಲೆಂದು 'ಶ್ರೀಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದನಿಲಯ'ವನ್ನು, 'ಸಂಸ್ಕೃತ ವಿದ್ಯಾಪೀಠ'ವನ್ನು ಪ್ರಾರಂಭಿಸಬೇಕೆಂದು ಮನಸ್ಸು ಮಾಡಿದರು. ಯಾವುದಕ್ಕೂ ಅಥಣಿಯ ಶಿವಯೋಗಿಗಳ ಆಶೀರ್ವಾದ ಬೇಕೆಂಬುದು ಮೃತ್ಯುಂಜಯಪ್ಪಗಳ ಇಚ್ಛೆ. ಅಥಣಿಗೆ ಹೋಗಿ ಶ್ರೀಗಳವರ ಆಶೀರ್ವಾದವನ್ನು ಪ್ರಾರ್ಥಿಸಿದರು. ಶಿವಯೋಗಿಗಳು ರುದ್ರಾಕ್ಷಿ ಮಾಲೆಯನ್ನು ಪ್ರಸಾದವಾಗಿತ್ತು, 'ನಿನ್ನದು ತವನಿಧಿ ಜೋಳಿಗೆ, ಮುಂದೆ ಸಾಗು' ಎಂದು ಆಶೀರ್ವದಿಸಿದರು. 'ಶ್ರೀ ಮನ್ನಿರಂಜನ ಜಗದ್ಗುರು ಮುರುಘರಾಜೇಂದ್ರ ಪ್ರಸಾದನಿಲಯ' ಈ ಹಿನ್ನೆಲೆಯಲ್ಲಿ ೧೯೧೭ರಂದು ಸ್ಥಾಪನೆಗೊಂಡಿತು. ದೊಡ್ಡ ನದಿಗಳ ಉಗಮ, ಸಣ್ಣ ಪ್ರಮಾಣದಲ್ಲಿರುವಂತೆ ಈ ಪ್ರಸಾದನಿಲಯವೂ ಸಣ್ಣ ಪ್ರಮಾಣದಲ್ಲಿಯೇ ಪ್ರಾರಂಭವಾಯಿತು. ಇದನ್ನು ಗಟ್ಟಿಗೊಳಿಸಲು ಮೃತ್ಯುಂಜಯಸ್ವಾಮಿಗಳು ಬಹಳ ಕಷ್ಟಪಟ್ಟರು. ಹಗಲಿರುಳು ಬೆವರು ಸುರಿಸಿ ದುಡಿದರು. ಯಾವೊಬ್ಬ ಶ್ರೀಮಂತನನ್ನೂ ಕೈಯೊಡ್ಡಿ ಕೇಳುವ ಸ್ವಭಾವ ಅವರದಲ್ಲ. ನಿಧಿಸಂಗ್ರಹ ಅವರ ಜಾಯಮಾನಕ್ಕೆ ಸಲ್ಲದು. ಸಾಮಾನ್ಯರ ಸಮುದಾಯದಿಂದ ಈ ಸಂಸ್ಥೆ ಅಸಾಮಾನ್ಯ ಸಂಸ್ಥೆಯಾಗಿ ಬೆಳೆಯಬೇಕೆಂಬುದು ಅವರ ಬಯಕೆ. ಅವರ ಕಪನಿಗೆ ಕಿಸೆಯೆಂಬುದೇ ಇರಲಿಲ್ಲ. ಹೀಗಾಗಿ ತಾವೇ ಸ್ವತಃ ಮನೆಮನೆಗೆ ಹೋಗಿ ಕಂತಿಭಿಕ್ಷ ಮಾಡಿ ದೊರೆತ ಪ್ರಸಾದವನ್ನು ವಿದ್ಯಾರ್ಥಿಗಳಿಗೆ ನೀಡುತ್ತಿದ್ದರು. ಧಾರವಾಡದಲ್ಲಲ್ಲದೆ ಮಿಕ್ಕ ಊರುಗಳಿಗೂ ಕಾಲುನಡಿಗೆಯಲ್ಲಿ ಸಂಚರಿಸಿ, ಮನೆಮನೆಗೆ ಹೋಗಿ, ಪ್ರಸಾದನಿಲಯಕ್ಕೆ ಬೇಕಾದ ಭಿಕ್ಷೆಯನ್ನು ಎತ್ತುತ್ತಿದ್ದರು. ತಮ್ಮ ಜೋಳಿಗೆಯ ಬಲದಿಂದಲೇ ಈ ಪ್ರಸಾದನಿಲಯವನ್ನು ಕಟ್ಟಬೇಕೆಂದು ಶ್ರೀಮದಥಣಿ ಶಿವಯೋಗಿಗಳ ಅಪ್ಪಣೆಯಾಗಿದ್ದಿತು. ಅದನ್ನು ಮೃತ್ಯುಂಜಯಸ್ವಾಮಿಗಳು ಅಕ್ಷರಶಃ ಪಾಲಿಸಿದರು. ಬಗಲಿಗೆ ಜೋಳಿಗೆ ಹಾಕಿಕೊಂಡು ಕೈಯಲ್ಲಿ ತಂಬೂರಿಯನ್ನು ಹಿಡಿದು, ಪ್ರಸಾದನಿಲಯದ ಭಿಕ್ಷೆಗೆ ಹೊರಟ ದೃಶ್ಯ ಕಣ್ಣುಕಟ್ಟಿದಂತಿತ್ತು. ಮೃತ್ಯುಂಜಯ ಅಪ್ಪಗಳ ಕಣ್ಣುಮುಂದೆ ಇದ್ದುದು ಲೋಕಸಂಗ್ರಹ ; ಧನಸಂಗ್ರಹವಲ್ಲ. ತಮ್ಮ ಪ್ರಸಾದನಿಲಯಕ್ಕಾಗಿ ಧಾನ್ಯಸಂಗ್ರಹಕ್ಕೆ

ಹೊರಟವರು ಅಲ್ಲಲ್ಲಿಯ ಬಡವಿದ್ಯಾರ್ಥಿಗಳಿಗೆ, ಶಾಲೆಗಳಿಗೆ ಆ ಸಂಗ್ರಹವನ್ನು ದಾನವಾಗಿ ಕೊಡುತ್ತಿದ್ದರು. ಅವರಿಗೆ ಒಂದು ಶ್ರದ್ಧೆ ಇತ್ತು. ನಂಬಿಕೆ ಬಲಿದುಬಂದಿತ್ತು. ಶಿವಯೋಗಿಗಳು ಪ್ರಸಾದನಿಲಯವನ್ನು ಮುನ್ನಡೆಸುವರೆಂಬ ದೃಢವಿಶ್ವಾಸ ಅವರದಾಗಿದ್ದಿತು. 'ನನ್ನದು ಶಿವನ ಜೋಳಿಗೆ, ಇದು ಜನರ ಹಣ, ಇದು ಅವರಿಗೇ, ಊರಿನವರಿಗೇ ಸಲ್ಲಬೇಕು ; ಶರಣಧರ್ಮ ಪ್ರಸಾರವಾದರೆ ಸಾಕು.' ಈ ನಿಲುಮೆಯಿಂದ ಹೆಗಲಿಗೆ ಜೋಳಿಗೆ ಹಾಕಿ ಬರಿಗಾಲಿನಿಂದ ನಡೆದು ಊರೂರಿನ, ಮನೆಮನೆಗೆ ಸಂಚರಿಸಿ ಶಿವನ ಭಿಕ್ಷಾಟನ ಲೀಲೆಯನ್ನೇ ಆಚರಿಸಿದರು. ಈ ಭಿಕ್ಷಾಭೂಮಿಯ ಕಲ್ಪವೃಕ್ಷ 'ಶ್ರೀ ಜಯದೇವ ಪ್ರಸಾದ ನಿಲಯ.'

ಮೃತ್ಯುಂಜಯಮಹಾಸ್ವಾಮಿಗಳ ಮನಸ್ಸಿನಲ್ಲಿ ಒಂದು ಬೃಹತ್ ಯೋಜನೆಯ ಸಂಕೀರ್ಣ ಕಲ್ಪನೆಯಿದ್ದಂತೆ ತೋರುತ್ತದೆ. ತಾವು ಬರಿಗಾಲಿನಿಂದ ನಡೆದು, ಕಷ್ಟನಷ್ಟಗಳನ್ನು ಅನುಭವಿಸುವುದರಲ್ಲಿ ಆತ್ಮ ಕಲ್ಯಾಣವಿದೆಯೆಂದು ನಂಬಿದ್ದರು. ಅದೇ ಅವರ ದೃಷ್ಟಿಯಲ್ಲಿ ಲಿಂಗಪೂಜೆ ; ಸಾಧನೆಯ ದಾರಿ, ಮೋಕ್ಷದ ಗುರಿ. ಅವರಿಗೆ ಪ್ರತಿಯೊಂದು ಹಳ್ಳಿಯೂ ಪ್ರಸಾದನಿಲಯವೇ. ಅಲ್ಲಿಯ ಪ್ರಸಾದನಿಲಯಗಳಿಗೆ ತಮ್ಮ ಕಾಣಿಕೆ ಸಲ್ಲಬೇಕೆಂದು ಅವರ ಆಶಯ. ಹೀಗೆ ಪ್ರಸಾದನಿಲಯಗಳ ಸಂಕೀರ್ಣದೊಂದಿಗೆ ಧಾರವಾಡದ ಪ್ರಸಾದನಿಲಯ ಮೈತುಂಬಿಕೊಂಡು ಬೆಳೆಯಿತು. ಇದೊಂದು ಕೇವಲ ಪ್ರಸಾದನಿಲಯವಾಗದೆ, ವಸತಿ ನಿಲಯವಾಗಬೇಕು ; ಸಾಹಿತ್ಯವೇದಿಕೆಯಾಗಬೇಕು ; ಶಿಕ್ಷಣ ಕೇಂದ್ರವಾಗಬೇಕು ; ಸಾಂಸ್ಕೃತಿಕ ಪ್ರತಿಷ್ಠಾನವಾಗಬೇಕು ಎಂದು ಅವರ ಸಂಕಲ್ಪ ಇದ್ದಿತು. ಈಗ ಪ್ರಸಾದನಿಲಯದ ವಿದ್ಯಾರ್ಥಿಗಳಿಗಾಗಿ ಒಂದು ವಸತಿಗೃಹದ ನಿರ್ಮಾಣಕ್ಕೆ ಯೋಚಿಸಿದರು. ಅದಕ್ಕಾಗಿ ತ್ರಿಷಷ್ಠಿಪುರಾತನರ ಮೊರೆಹೊಕ್ಕರು. ತಮಿಳುನಾಡಿನ ಈ ತ್ರಿಷಷ್ಠಿಪುರಾತನರು ಶಿವಭಕ್ತಿಯಲ್ಲಿ ಅಗ್ರೇಶ್ವರರು. ಭಕ್ತಿಭಾಂಡಾರಿ ಬಸವಣ್ಣನವರಿಗೆ ಇವರು ಆದ್ಯರು, ವೇದ್ಯರು. ವಿಶೇಷ ಓದಿಕೊಳ್ಳದ ಮೃತ್ಯುಂಜಯಸ್ವಾಮಿಗಳಿಗೆ ಇವೆಲ್ಲ ವಿಷಯ ವೇದ್ಯವಾಗುತ್ತಿದ್ದುದು ಒಂದು ಚೋದ್ಯವೇ. ಅರವತ್ತುಮೂವರು ಪುರಾತನರ ಹೆಸರಿನಲ್ಲಿ ಅರವತ್ಮೂರು ಹಂಚಿನ ಕೋಣೆಗಳನ್ನು ಆಗಿನ ಬಡತನದ ಪರಿಸ್ಥಿತಿಗೆ ತಕ್ಕಂತೆ ಕಟ್ಟಿಸಿದರು. ಒಂದೊಂದು ಕೋಣೆಯಲ್ಲಿ ಇಬ್ಬರು ಮೂವರು ವಿದ್ಯಾರ್ಥಿಗಳಿರಬೇಕು. ಅವರು ತಮ್ಮ ತಮ್ಮ

ಕೋಣೆಗಳನ್ನೂ ಪರಿಸರವನ್ನೂ ತಾವೇ ಸ್ವಚ್ಛಮಾಡಿಕೊಳ್ಳಬೇಕು. ತನು–ಮನ–ಭಾವ ಇವೆಲ್ಲ ಒಟ್ಟಾಗಿಯೇ ಕೆಲಸಮಾಡಬೇಕೆಂಬುದು ಶ್ರೀಗಳ ಸಿದ್ಧಾಂತ. ವಿದ್ಯಾರ್ಥಿ ಅಲ್ಲಿಗೆ ಬರುವುದು ಜ್ಞಾನದಾಹಕ್ಕಾಗಿ ; ಅಲ್ಲಿರುವುದು ಪ್ರಸಾದ ದಾಸೋಹ. ಪಾಶ್ಚಾತ್ಯ ಶಿಕ್ಷಣ ಪಡೆಯುತ್ತಿದ್ದರೂ ವಿದ್ಯಾರ್ಥಿಗಳಿಗೆ ತಮ್ಮ ಧರ್ಮ, ಸಮಾಜ, ಸಂಸ್ಕೃತಿ, ಆಚಾರ–ವಿಚಾರಗಳ ಅರಿವು ಅವಶ್ಯವೆಂಬುದು ಶ್ರೀಗಳವರ ಶಿಕ್ಷಣ ಸಿದ್ಧಾಂತ. ಇದಕ್ಕೆ ಪೋಷಕವಾಗುವ ಎಲ್ಲ ಯೋಜನೆಗಳನ್ನೂ ಅಲ್ಲಿ ಹಮ್ಮಿಕೊಳ್ಳಲಾಯಿತು. ಪ್ರಸಾದ ಸ್ವೀಕರಿಸುವಾಗ 'ಮೌನದಿಂದುಂಬುವುದು ಆಚಾರವಲ್ಲ, ತುತ್ತಿಗೊಮ್ಮೆ ಶಿವಶರಣರ ನೆನೆಯುತ್ತಿರಬೇಕು' ಎಂಬುದು ಪ್ರಸಾದನಿಲಯದ ಒಂದು ಕಟ್ಟಳೆ. ಅದಕ್ಕಾಗಿ ವಿದ್ಯಾರ್ಥಿಗಳು ವಚನಗಳನ್ನು ಓದಿಕೊಂಡು, ಅರ್ಥೈಸಿಕೊಂಡು ಕಂಠಪಾಠ ಮಾಡಬೇಕಾಗುತ್ತಿದ್ದಿತು. ದಿನದಿನವೂ ಈ ರೂಢಿಬಲಿದಂತೆ ವಿದ್ಯಾರ್ಥಿಗಳಲ್ಲಿ ಆಧ್ಯಾತ್ಮಿಕ ಸಂಪತ್ತು ಅವ್ಯಕ್ತವಾಗಿ ಬಲಿಯತೊಡಗಿತು. ಮಠದಲ್ಲಿ ಪುರಾಣ ಪ್ರವಚನ ಉಪನ್ಯಾಸ ಇವು ಅನೇಕ ಸಲ ನಡೆಯುತ್ತಿದ್ದವು. ಇವುಗಳ ಮೂಲ ಉದ್ದೇಶ ಜನತೆಯ ಮನಸ್ಸನ್ನು ಸಂಸ್ಕಾರಗೊಳಿಸುವುದು ; ಪ್ರಸಾದನಿಲಯದ ವಿದ್ಯಾರ್ಥಿಗಳೂ ಅಲ್ಲಿ ಭಾಗವಹಿಸಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕೆಂಬುದು. ವಿದ್ಯಾರ್ಥಿಗಳಿಗೆ ಆಧ್ಯಾತ್ಮಿಕ ಜ್ಞಾನವನ್ನು ವ್ಯಕ್ತವಾಗಿಯೂ ಅವ್ಯಕ್ತವಾಗಿಯೂ ನೀಡುವ ಈ ಕಾರ್ಯ ಅಲ್ಲಿ ನಿರಂತರ ಮುನ್ನಡೆಯಿತು.

## ಶಿವಯೋಗಿಗಳ ವಿಗ್ರಹ

ತಮಗೆ ಕರೆದಲ್ಲಿ ಬರುವೆನೆಂದು ಅಭಯವಿತ್ತ ಅಥಣಿಯ ಶ್ರೀ ಶಿವಯೋಗವರೇಣ್ಯರು ಲಿಂಗೈಕ್ಯರಾದುದರಿಂದ ಅವರು ವಿಗ್ರಹರೂಪದಲ್ಲಿ ಈ ಪ್ರಸಾದನಿಲಯದೊಳಗೆ ಮೂರ್ತಮಾಡಬೇಕೆಂಬುದು ಮೃತ್ಯುಂಜಯ ಸ್ವಾಮಿಗಳ ಅಪೇಕ್ಷೆಯಾಗಿದ್ದಿತು.

ಬೆಳಗಾವಿಯ ಬೆಂಬಳಗಿ ವಿರೂಪಾಕ್ಷಪ್ಪನವರು ಮೃತ್ಯುಂಜಯ ಸ್ವಾಮಿಗಳ ಪರಮಭಕ್ತರು. ಅವರು ಅಥಣಿ ಶಿವಯೋಗಿಗಳ ಶಿಷ್ಯರು. ಶಿವಯೋಗಿಗಳು ಲಿಂಗೈಕ್ಯರಾದಮೇಲೆ ಅವರ ಮೂರ್ತಿಯನ್ನು ಕೆತ್ತಿಸಿ

ಪ್ರತಿಷ್ಠಾಪನೆ ಮಾಡಬೇಕೆಂಬುದು ವಿರೂಪಾಕ್ಷಪ್ಪನವರ ಹಿರಿಯಾಸೆ. ಆ ಮೂರ್ತಿ ಸಿದ್ಧವಾಗುವ ಕಾಲಕ್ಕೆ ಮೃತ್ಯುಂಜಯಸ್ವಾಮಿಗಳು ಬಹು ಎಚ್ಚರಿಕೆ ವಹಿಸಿ ಅಲ್ಲಿಯ ಕಾರ್ಯವನ್ನು ನೋಡಿಕೊಳ್ಳುತ್ತಿದ್ದರು. ಶಿಲ್ಪಿ ಏನಾದರೂ ಬದಲಾವಣೆ ಮಾಡಲು ಚಾಣದಿಂದ ಹೊಡೆದರೆ ಶಿವಯೋಗಿಗಳಿಗೆ ನೋವಾಗುವುದೆಂದು ಕಣ್ಣೀರು ಸುರಿಸುತ್ತಿದ್ದರು. 'ಬೇಡ ಬೇಡ, ಸರ್ವಥಾ ಬೇಡ' ಎಂದು ಶಿಲ್ಪಿಗೆ ಹೇಳುತ್ತಿದ್ದರು. ಇಂಥ ಮುಗ್ಧಭಕ್ತಿ ಮೃತ್ಯುಂಜಯಪ್ಪಗಳವರದು. ಆದರೆ ಮೂರ್ತಿ ಯಥಾವತ್ತಾಗಿ ಶಿವಯೋಗಿಗಳಂತೆಯೇ ಆಗಬೇಕೆಂಬುದು ಶ್ರೀಗಳ ಅಪೇಕ್ಷೆ. ಮೂರ್ತಿ ಸಿದ್ಧವಾಯಿತು. ಅದು ಧಾರವಾಡದ ಮುರುಘರಾಜೇಂದ್ರ ಪ್ರಸಾದನಿಲಯದ ಅರವತ್ಮೂರು ಪುರಾತನರ ಮಂಟಪದ ಮಧ್ಯದಲ್ಲಿ ಸ್ಥಾಪನೆಯಾಗಬೇಕೆಂದು ಶ್ರೀಗಳು ಸೂಚಿಸಿದರು. ಅವರ ಮಾತು ಕೃತಿಗಿಳಿಯಿತು. ಶಿವಯೋಗಿಗಳ ವಿಗ್ರಹ ಪ್ರಸಾದನಿಲಯದ ಮಧ್ಯದಲ್ಲಿ ವಿರಾಜಮಾನವಾಯಿತು. ಬದುಕಿರುವಾಗ ಮತ್ತೆ ಮತ್ತೆ ಮೃತ್ಯುಂಜಯ ಸ್ವಾಮಿಗಳು ಅಥಣಿಗೆ ಹೋಗಿ ಶಿವಯೋಗಿಗಳವರೊಡನೆ ಸಮಾಲೋಚನೆ ಮಾಡಿ ಅವರ ಆಶೀರ್ವಾದ ಪಡೆದುಕೊಂಡು ಬರುತ್ತಿದ್ದರು. ಲಿಂಗೈಕ್ಯರಾದ ಮೇಲೆ ಹಿಂದೆ ಅಭಿವಚನವಿತ್ತಂತೆ ತಾವೇ ಮೃತ್ಯುಂಜಯಪ್ಪಗಳಿದ್ದಲ್ಲಿ ಬಂದು, ಮೂರ್ತಗೊಂಡಂತಾಯಿತು.

ಮೃತ್ಯುಂಜಯ ಮಹಾಸ್ವಾಮಿಗಳ ಭಕ್ತಿಯ ಪರಾಕಾಷ್ಠೆ ಎಂಬಂತೆ ಶಿವಯೋಗಿಗಳ ಮೂರ್ತಿ ರೂಪುಗೊಂಡಿದೆ. ಅದನ್ನು ಕಂಡರಿಸುವವನಲ್ಲಿ ಮಹಾಸ್ವಾಮಿಗಳು ಅಂತಹ ಶಕ್ತಿಯನ್ನು ದಯಪಾಲಿಸಿದರು. ಸ್ವತಃ ಶಿವಯೋಗಿಗಳೇ ಪ್ರತ್ಯಕ್ಷವಾಗಿ ಕುಳಿತಿರುವಂತೆ ಆ ಮೂರ್ತಿ ಸಜೀವ ಕಳೆಯಿಂದ ಕೂಡಿದೆ ; ಕಂಡವರಲ್ಲಿ ಭಕ್ತಿಯ ಭಾವ ತಂತಾನೆ ಹೊರಹೊಮ್ಮಿ ಬರುವಂತಾಗಿದೆ.

ಮೃತ್ಯುಂಜಯಮಹಾಸ್ವಾಮಿಗಳು ಭಾವುಕತೆಯ ಚರಮಸೀಮೆಯನ್ನು ಮುಟ್ಟಿದವರು. ಅವರು ಅಣುರೇಣು ತೃಣಕಾಷ್ಠದಲ್ಲಿ ಶಿವಯೋಗಿಗಳನ್ನು ಕಾಣುವವರು. ಶಿವಯೋಗಿಗಳಿಲ್ಲದ ತಾಣವೇ ಇಲ್ಲ, ಅವರ ದೃಷ್ಟಿಯಲ್ಲಿ. ಶಿವಯೋಗಿಗಳು ಅವರ ಕಣ್ಣನ್ನು ತುಂಬಿದ ಬಳಿಕ ನೋಡಲು ಬೇರೆ ಏನುಂಟು ಅವರಿಗೆ ? ಇಂತಹ ಪರಮಶಿಷ್ಯನಿಗೆ ಅಲ್ಲಿ ಮೂರ್ತಿಗೊಂಡುದು ಒಂದು ಶಿಲಾಮೂರ್ತಿಯಲ್ಲ ; ಸಾಕ್ಷಾತ್ ಶಿವಯೋಗಿಯೇ. ಯಾರಾದರೂ

ಅವರನ್ನು ಕಾಣಲು ಬಂದರೆ, 'ಶಿವಯೋಗಿಗಳ ದರ್ಶನವನ್ನು ಮೊದಲು ಮಾಡಿಕೊಂಡು ಬನ್ನಿರಿ' ಎಂದು ಹೇಳುತ್ತಿದ್ದರು. ಅಂದರೆ ಶಿವಯೋಗಿಗಳು ಅಲ್ಲಿದ್ದಾರೆ ಎಂಬ ದೃಢವಿಶ್ವಾಸ ಅವರಿಗಿದ್ದಿತು. ಪ್ರತಿದಿನ ಬೆಳಗು ಮತ್ತು ಸಾಯಂಕಾಲ ಶಿವಯೋಗಿಗಳ ಸುತ್ತು ಪ್ರದಕ್ಷಿಣೆ ಹಾಕುವುದು ; ರೂಢಿ. ಅಲ್ಲಿ ಭಕ್ತಿಯೂ ಆಯಿತು, ಅಭ್ಯಾಸ ಮಾಡುವ ವಿದ್ಯಾರ್ಥಿಗಳಿಗೆ ದರ್ಶನವೂ ಆಯಿತು ; ಮೇಲ್ವಿಚಾರಣೆಯೂ ಆಯಿತು. ಎಲ್ಲಿಯಾದರೂ ವಿದ್ಯಾರ್ಥಿಗಳು ಸದ್ದು ಮಾಡುತ್ತಿದ್ದರೆ 'ಅಲ್ಲಿ ಶಿವಯೋಗಿಗಳಿದ್ದಾರೆ, ಗದ್ದಲ ಮಾಡಬಾರದು' ಎಂದು ಸಾವಕಾಶವಾಗಿ ಮೆಲುದನಿಯಲ್ಲಿ ಹೇಳುತ್ತಿದ್ದರು. ಅಂತಹ ಪ್ರಶಾಂತ ವಾತಾವರಣ ಅಲ್ಲಿ ನಿರ್ಮಾಣಗೊಂಡಿದೆ. ಈ ವಾತಾವರಣ ಗುರುಕುಲಕ್ಕೆ ದೈವಿಕತೆಯನ್ನು ಒದಗಿಸಿದೆ. ಪಾಶ್ಚಿಮಾತ್ಯದೇಶಗಳಲ್ಲಿ ವಿಶ್ವವಿದ್ಯಾಲಯದ ಕೇಂದ್ರಸ್ಥಾನಗಳಲ್ಲಿ ಚರ್ಚುಗಳಿರುವುದುಂಟು. ಮಾನಸಿಕ ಒತ್ತಡದ ಇಂದಿನ ಯುಗದಲ್ಲಿ ಅವುಗಳ ಆವಶ್ಯಕತೆ ಇನ್ನೂ ಅಧಿಕವೆನಿಸಿದೆ. ಇತ್ತೀಚೆಗೆ ಅಮೇರಿಕೆಯಲ್ಲಿ ರೂಹುಗೊಂಡ ಎಂ.ಐ.ಟಿ.ಯಂತಹ ಜಗದ್ವಿಖ್ಯಾತ ವಿಜ್ಞಾನ ವಿಶ್ವವಿದ್ಯಾಲಯ ಕೇಂದ್ರದಲ್ಲಿಯೂ ಆಧುನಿಕ ಮಾದರಿಯ ಚರ್ಚ್ ಎಂದು ಕರೆಯಿಸಿಕೊಳ್ಳುವ ವಿಶ್ರಾಂತಿಧಾಮವಿದೆ. ಇಲ್ಲಿ ಮೃತ್ಯುಂಜಯಸ್ವಾಮಿಗಳ ಸಂಕಲ್ಪ ಅದಕ್ಕಿಂತಲೂ ನೂರುಮಡಿ ಪ್ರಶಾಂತ ವಾತಾವರಣವನ್ನೂ ಭಾಕ್ತಿಕ ಸನ್ನಿವೇಶವನ್ನೂ ನಿರ್ಮಾಣಮಾಡಿದೆ. ಸೃಷ್ಟಿಯಲ್ಲಿ ಅವ್ಯಕ್ತವಾಗಿರುವ ಭಕ್ತಿಯ ಶಕ್ತಿ ಒಂದೊಂದು ಸಲ ಒಂದೊಂದು ರೂಪದಲ್ಲಿ ವ್ಯಕ್ತಗೊಳ್ಳುತ್ತದೆ. ಮೃತ್ಯುಂಜಯಸ್ವಾಮಿಗಳ ಅಂಥ ಶಕ್ತಿ ಇಲ್ಲಿ ಗುಡಿಗಟ್ಟಿದ್ದಿತು. ಅವರು ಪರಮಾತ್ಮನ ದರ್ಶನವನ್ನು ನಿತ್ಯನಿತ್ಯವೂ ಕಾಣುವವರು. ಎಷ್ಟೋ ಸಲ ಶಿವಯೋಗಿಗಳು ಬಕುಲವೃಕ್ಷದ ಹತ್ತಿರ ಬಂದು ಅವರಿಗೆ ಏನೋ ಹೇಳಿ ಹೋದರೆಂದು ಆನಂದಬಾಷ್ಪಗಳನ್ನು ಸುರಿಸುತ್ತಿದ್ದರು. ಅದು ಅವರ ಪಾಲಿನ ಸತ್ಯ. ಅವರ ಭಾವುಕತೆಯನ್ನು ಪ್ರಶ್ನಿಸುವಂತಿಲ್ಲ.

ಒಮ್ಮೆ ಮಠದ ವಿದ್ಯಾರ್ಥಿಗಳು ಒಂದು ನಾಟಕವಾಡುತ್ತಿದ್ದರು. ಅದು ಪ್ರಭುದೇವರ ನಾಟಕ. ಬಸವಣ್ಣನವರು ೧೨ ವರ್ಷ ಹಮ್ಮಿಕೊಂಡು ನಿಂತಿದ್ದ ಶೂನ್ಯಸಿಂಹಾಸನವನ್ನು ಪ್ರಭು ಆರೋಹಿಸುವ ದೃಶ್ಯ. ಪ್ರಭುದೇವರು ಬಂದರು. ಬಸವಣ್ಣನವರು ಅವರನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದರು. ಮುಂದೆ ಕುಳಿತಿದ್ದ ಮೃತ್ಯುಂಜಯಪ್ಪಗಳು ತಟ್ಟನೆ ಎದ್ದು

ಹೋಗಿ ಆ ಪ್ರಭುದೇವರ ಪಾದಕ್ಕೆ ನಮಸ್ಕಾರ ಮಾಡಿದರು. ಸಭೆಯೆಲ್ಲ 'ಜಯನಮಃ ಪಾರ್ವತಿಪತೇ ಹರಹರ' ಎಂದು ಉಗ್ಗಡಿಸಿದರು. ಮೃತ್ಯುಂಜಯಮಹಾಸ್ವಾಮಿಗಳ ವ್ಯಕ್ತಿತ್ವ ಹೇಗೆ ಇತ್ತೆಂಬುದನ್ನು ಪ್ರತಿಫಲಿಸುವ ದೃಶ್ಯವಿದು.

## ಕನಸು ನನಸಾಯಿತು

ಮೃತ್ಯುಂಜಯಸ್ವಾಮಿಗಳ ದಿವ್ಯವ್ಯಕ್ತಿತ್ವದ ಸನ್ನಿಧಾನದಲ್ಲಿ ಗುರುಕುಲ ಹುಣ್ಣಿಮೆಯ ಚಂದ್ರನಂತೆ ಬೆಳೆಯತೊಡಗಿತು. ಮೊದಮೊದಲು ಬರಿಗಾಲಿನಿಂದ ಊರೂರಿಗೆ ಮನೆ ಮನೆಗೆ ಸಂಚರಿಸಿ ಈ ಪ್ರಸಾದನಿಲಯವನ್ನು ನಡೆಸಿಕೊಂಡು ಬರುತ್ತಿದ್ದ ಮೃತ್ಯುಂಜಯಸ್ವಾಮಿಗಳ ವ್ಯಕ್ತಿತ್ವದ ಹಂದರ ವಿಶಾಲವಾಯಿತು. ಅವರ ಹೆಸರನ್ನು ಕೇಳಿದ ಜನತೆಯ ಹೃದಯ ಭಕ್ತಿಯಿಂದ ತುಂಬಿ ತುಳುಕಾಡತೊಡಗಿತು. ಈಗ ಪ್ರಸಾದನಿಲಯಕ್ಕೆ ಧನಧಾನ್ಯಗಳು ರಾಶಿರಾಶಿಯಾಗಿ ಬರತೊಡಗಿದವು. ವಿದ್ಯಾರ್ಥಿಗಳ ಸಂಖ್ಯೆ ಇಮ್ಮಡಿ ಮುಮ್ಮಡಿ ನಾಲ್ಮಡಿಯಾಗುತ್ತ ಹೋಯಿತು. ಶಾಲೆ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಉತ್ತಮ ಅತ್ಯುತ್ತಮ ವರ್ಗಗಳಲ್ಲಿ ಉತ್ತೀರ್ಣರಾಗತೊಡಗಿದರು. ಪವಿತ್ರಸನ್ನಿವೇಶದಲ್ಲಿ ನಾಲ್ಕಾರು ವರ್ಷಗಳನ್ನು ಕಳೆಯುತ್ತಿದ್ದುದರಿಂದ ಅವರ ವ್ಯಕ್ತಿತ್ವ ನೈತಿಕ ನೆಲೆಗಟ್ಟಿನ ಮೇಲೆ ಭದ್ರವಾಗಿ ರೂಹುಗೊಂಡಿತು. ಪ್ರತಿವರ್ಷ ತಂಡೋಪತಂಡವಾಗಿ ಹೊರಬಂದ ನಿಷ್ಠಾವಂತ ಪದವೀಧರರು ಸಾವಿರಾರು ಕ್ಷೇತ್ರಗಳಲ್ಲಿ ಕೆಲಸ ಮಾಡುವುದರ ಮೂಲಕ ಪ್ರಸಾದನಿಲಯದ ಸಂತಾನ ಬಳ್ಳಿ ಬಳ್ಳಿಯಾಗಿ ಹಳ್ಳಿ–ಪಟ್ಟಣಗಳಲ್ಲಿ ಹರಡಿನಿಂತಿತು. ಈ ನಿಷ್ಠಾವಂತ ಪಡೆ ಸಿದ್ಧವಾದುದು ಮೃತ್ಯುಂಜಯಮಹಾಸ್ವಾಮಿಗಳು ಹಾಕಿಕೊಟ್ಟ ಮಾರ್ಗದಲ್ಲಿ. ಬೆಳಗಿನ ಐದು ಗಂಟೆಗೆ ಏಳುವುದು, ಸ್ನಾನ, ಪ್ರಾರ್ಥನೆ, ಅಭ್ಯಾಸ, ಕೈಕೆಲಸ, ವರ್ಗಬೋಧನೆ, ಆಟ, ಪ್ರವಚನ ಮತ್ತೆ ಪ್ರಾರ್ಥನೆ–ಈ ಕ್ರಮದಲ್ಲಿ ಒಂದು ಮಾದರಿಯ ಪಾಠಶಾಲೆಯೇ ರೂಪಗೊಂಡು ಧಾರ್ಮಿಕ ಬೋಧನೆ, ನೈತಿಕ ವಿಚಾರ, ವಚನವಾಙ್ಮಯದ ಅಧ್ಯಯನ ಇವು ವಿದ್ಯಾರ್ಥಿಗಳ ಉಸಿರು, ಪ್ರಾಣಗಳಾದವು. ವೈಜ್ಞಾನಿಕ ಗಂಡುದಾಳಿಯಿಂದ ನೈತಿಕ ಮೌಲ್ಯಗಳು

ತೂರಿ ಹಾರಿಹೋಗುತ್ತಿರುವ ಈ ಸಮಯದಲ್ಲಿ ಇಂತಹ ಗಟ್ಟಿ ವಿದ್ಯಾರ್ಥಿಗಳು ಆತ್ಮಸಾಕ್ಷಿಯಾಗಿ ದುಡಿದು ನಾಡಿಗೂ, ಸಮಾಜಕ್ಕೂ, ತಮಗೆ ಪ್ರಸಾದವನ್ನಿತ್ತ ಮಠಕ್ಕೂ ಕೀರ್ತಿಯನ್ನು ತಂದಿರುವರು. ಇಲ್ಲಿ ಕಲಿತ ವಿದ್ಯಾರ್ಥಿಗಳಲ್ಲಿ ದೊಡ್ಡ ಪ್ರಾಧ್ಯಾಪಕರುಂಟು, ಕವಿ-ವಾಗ್ಮಿಗಳುಂಟು, ವಿಜ್ಞಾನಿ, ವೈದ್ಯ, ಎಂಜನೀಯರರುಂಟು. ಇವರೆಲ್ಲ ಮೃತ್ಯುಂಜಯಫಲ.

ದೊಡ್ಡವರು ಹಾಕಿಕೊಟ್ಟ ದಾರಿಯನ್ನು ಮಿಕ್ಕವರು ತುಳಿಯುತ್ತಾರೆ. ಮೃತ್ಯುಂಜಯಸ್ವಾಮಿಗಳು ಅಂತಹ ಶ್ರೇಷ್ಠ ಮಹಾನುಭಾವಿಗಳು. ಅವರಿಂದ ಕಾವಿಯ ಬಟ್ಟೆಗೆ ಒಂದು ಗೌರವ ಪ್ರಾಪ್ತವಾಯಿತು. ಸ್ವಾಮಿಗಳ ಆಚಾರ-ವಿಚಾರ ಹೇಗಿರಬೇಕು, ಮಠಮಾನ್ಯಗಳಲ್ಲಿ ಯಾವ ಕೆಲಸ ನಡೆಯಬೇಕು ಎಂಬುದಕ್ಕೆ ಅವರು ಪ್ರತ್ಯಕ್ಷ ನಿದರ್ಶನವಾಗಿ ನಿಂತರು. ಕನ್ನಡ ನಾಡಿನಲ್ಲಿ ವೀರಶೈವ ಮಠಗಳಿಲ್ಲದ ಊರುಗಳಿಲ್ಲ. ಸಾವಿರಾರು ಜನ ಸ್ವಾಮಿಗಳು ಮೃತ್ಯುಂಜಯಮಹಾಸ್ವಾಮಿಗಳ ಅಭಿಮತದಂತೆ ಪ್ರಸಾದನಿಲಯಗಳನ್ನು ತೆರೆದರು. ವಿದ್ಯಾರ್ಥಿಗಳಿಗೆ ಪ್ರಸಾದವನ್ನಿತ್ತರು. ಹೈಸ್ಕೂಲುಗಳು ಅಲ್ಲಲ್ಲಿ ತಲೆಯೆತ್ತಿದವು. ಕಾಲೇಜುಗಳ ಸಂಖ್ಯೆ ಬೆಳೆಯಿತು. ಕರ್ನಾಟಕ ಕಾಲೇಜು ಬಡವರಿಂದ, ವೀರಶೈವರಿಂದ ತುಂಬಿ ತುಳುಕಿತು. ಇದಲ್ಲದೆ ಬಾಗಿಲುಕೋಟೆ, ವಿಜಾಪೂರ, ಬಳ್ಳಾರಿ, ಕಲಬುರ್ಗಿ—ಸಾವಿರಾರು ಕಡೆಗೆ ವಿದ್ಯಾಸಂಸ್ಥೆಗಳು ತಲೆಯೆತ್ತಿದವು. ಈ ಶತಮಾನದ ವೀರಶೈವದ ಮಹೋನ್ನತ ಕಾಣಿಕೆಯೆಂದರೆ ಈ ಸಮಾಜದವರು ಸ್ಥಾಪಿಸಿದ ಉನ್ನತ ಶಿಕ್ಷಣದ ವಿದ್ಯಾಸಂಸ್ಥೆಗಳು, ನಡೆಸಿಕೊಂಡು ಬಂದ ಪ್ರಸಾದ ನಿಲಯಗಳು. ಇವುಗಳಲ್ಲಿ ಮುರುಘರಾಜೇಂದ್ರಪ್ರಸಾದನಿಲಯ ಆಧುನಿಕ ವಿಶ್ವವಿದ್ಯಾನಿಲಯದಂತೆ, ಗುರುಕುಲಶಿರೋರತ್ನವೆನಿಸಿ ಪ್ರಸಾದನಿಲಯಗಳ ಅಧಿನಾಯಕತ್ವದಲ್ಲಿ ನಿಂತಿದೆ. ಮೂಲತಃ ಕುಟೀರರೂಪದಲ್ಲಿದ್ದ ಅರವತ್ಮೂರು ಕೋಣೆಗಳಿಗೆ ಪ್ರತಿಯಾಗಿ ಇಂದು ಪ್ರಸಾದನಿಲಯದ ಭವ್ಯಕಟ್ಟಡ ತಲೆಯೆತ್ತಿನಿಂತಿದೆ. ಶ್ರೀಗಳು ಹಾಕಿದ ಯೋಜನೆಯಲ್ಲಿಯೇ ಅರವತ್ಮೂರು ಕೋಣೆಗಳು ಇಂದು ಸಿಮೆಂಟ್-ಗಾರೆ-ಗಚ್ಚಿನಲ್ಲಿ ಮೈವೆತ್ತು ನಿಂತಿವೆ. ಅರವತ್ತುಮೂರು ಪುರಾತನರಿಗೆ ಮತ್ತೆ ಅರವತ್ಮೂರು ನೂತನ ಪುರಾತನರು ಕೂಡಿಕೊಂಡು ಕೋಣೆಗಳ ಸಂಖ್ಯೆ ವರ್ಧಿಸಿದೆ. ಭಕ್ತರು ಭಕ್ತಿಯಿಂದ ಅವುಗಳನ್ನು ಕಟ್ಟಿಸಿಕೊಟ್ಟಿರುವ ಇವು, ಯಾವ ವಿಶ್ವವಿದ್ಯಾಲಯದ ವಸತಿಗೃಹಕ್ಕೂ ಹೊಯ್‌ಕೈ ಎನಿಸುವಂತೆ ತಲೆಯೆತ್ತಿ

ಬೆಳೆದಿವೆ. ಪ್ರಸಾದನಿಲಯದ ಗಡಿಯಾರ ಗೋಪುರ ವಿಶ್ವವಿದ್ಯಾಲಯದ ಗಡಿಯಾರಗೋಪುರಕ್ಕೆ ಸರಿಯೆನಿಸುವಂತೆ ಎದ್ದುನಿಂತಿವೆ. ಆ ನಿಲಯವನ್ನು ಪ್ರವೇಶಿಸಿದರೆ 'ಪುನರ್ಜನ್ಮ ನವಿದ್ಯತೇ' ಎಂಬ ಭಾವನೆ ಹುಟ್ಟುತ್ತದೆ. ಮೃತ್ಯುಂಜಯಸ್ವಾಮಿಗಳ ಕನಸು ನನಸಾಗಿದೆ.

## ವಿದ್ಯಾರ್ಥಿಯೇ ದೇವರು

ಮೃತ್ಯುಂಜಯ ಮಹಾಸ್ವಾಮಿಗಳಿಗೆ ವಿದ್ಯಾರ್ಥಿಗಳೇ ದೇವರು. ಅವರ ಸಂತೃಪ್ತಿಯೇ ಶಿವಸಂತೃಪ್ತಿ. ಅವರ ಅಂಗ ಮನ ಆತ್ಮಗಳು ಲಿಂಗವಾಗಬೇಕೆಂಬುದು ಅವರ ಗುರಿ. ಈ ಗುರಿ ಸಾಧನೆಗೆ ಅವರು ತುಳಿದ ದಾರಿ ಅಸದೃಶವಾದುದು. ತಂದೆತಾಯಿಗಳನ್ನು ತೊರೆದು ಬಂದ ಮಕ್ಕಳು ಮರುಗಬಾರದೆಂದು ಅವರನ್ನು ತಾಯಿಯಂತೆ ನೋಡಿಕೊಳ್ಳುತ್ತಿದ್ದರು.

ಒಂದು ಸಲ ಒಂದು ಟ್ರಕ್ಕಿನಲ್ಲಿ ಕಡಲೆಗಿಡ ಮತ್ತು ಕಬ್ಬಿನ ಹೊರೆಗಳನ್ನು ತರಿಸಿ ಮಠದ ಮುಂದೆ ಹಾಕಿಸಿದರು. ಗಂಟೆಯಾಯಿತು. ವಿದ್ಯಾರ್ಥಿಗಳೆಲ್ಲ ಬಂದರು. ಹಿಂದೆ ನೂರೋ ಇನ್ನೂರೋ ಇದ್ದ ವಿದ್ಯಾರ್ಥಿಗಳ ಸಂಖ್ಯೆ ಈಗ ಆರೇಳುನೂರು. ಎಲ್ಲರಿಗೂ ಆ ಪ್ರಸಾದವನ್ನು ಸ್ವೀಕರಿಸುವಂತೆ ಹೇಳಿದರು. ವಿದ್ಯಾರ್ಥಿಗಳು ತಬ್ಬಿಬ್ಬಾದರು. 'ಹೂಂ ತೆಗೆದುಕೊಳ್ಳಿ' ಎಂದು ಒಬ್ಬನಿಗೆ ಕಬ್ಬು, ಒಬ್ಬನಿಗೆ ಕಡಲೆಯಗಿಡ ಕೊಡುತ್ತ ಹೋದರು. 'ಈಗ ಶಿವಯೋಗಿಗಳಿಗೆ ಆನಂದ'ವೆಂದು ನುಡಿದು, ತಾವು ಅದನ್ನು ನೋಡುತ್ತ, ಸಂತೋಷಪಡುತ್ತ ಕುಳಿತುಕೊಂಡರು.

ಶ್ರಾವಣಮಾಸದಲ್ಲಿ ಗುರುಕುಲದ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಜನರು ಪ್ರಸಾದಕ್ಕೆ ಹೇಳುತ್ತಿದ್ದರು. 'ವಿದ್ಯಾರ್ಥಿಗಳಿಗೆ ತಡವಾಗತಕ್ಕುದಲ್ಲ, ಅವರನ್ನು ಸರಿಯಾಗಿ ನೋಡಿಕೊಳ್ಳಬೇಕು' ಎಂದು ಬಿನ್ನಹಮಾಡಿದವರಿಗೆ ಶ್ರೀಗಳವರು ಎಚ್ಚರಿಕೆ ಕೊಡುತ್ತಿದ್ದರು. ಒಮ್ಮೆ ಮಠದ ವಿದ್ಯಾರ್ಥಿಗಳು ಒಂದು ಕಡೆಗೆ ಇಂಥ ಪ್ರಸಾದಕ್ಕೆ ಹೋದಾಗ ತುಪ್ಪ ನೀಡುವವನು ಒಬ್ಬ ವಿದ್ಯಾರ್ಥಿಗೆ ಬಡಿಸದೆ ಮುಂದೆ ಹೋದನಂತೆ. 'ನನಗೆ ತುಪ್ಪ ನೀಡಿಲ್ಲ' ಎಂದು ವಿದ್ಯಾರ್ಥಿ ನುಡಿದಾಗ ಆತ ಸಿಟ್ಟಿನಿಂದ ಗಿಂಡಿಯಲ್ಲಿದ್ದ ಎಲ್ಲ

ತುಪ್ಪವನ್ನು ಆ ವಿದ್ಯಾರ್ಥಿಯ ತಾಟಿನಲ್ಲಿ ನೀಡಿ 'ಇದನ್ನು ಕುಡಿದೇ ಹೋಗಬೇಕು' ಎಂದು ಗದರಿಸಿದ. ಹಾಗೆ ಮಾಡಿದ ವಿದ್ಯಾರ್ಥಿಗೆ ಮರುದಿವಸ ವಾಂತಿಯಾಗತೊಡಗಿತು. ನಡೆದ ಸಂಗತಿಯನ್ನು ಕೇಳಿದ ಮೃತ್ಯುಂಜಯಪ್ಪಗಳಿಗೆ ವಿದ್ಯಾರ್ಥಿಗಳ ಬಡತನದ ಬಗ್ಗೆ ಕನಿಕರ, ಸಿರಿವಂತರ ನಡೆವಳಿಕೆಯ ಬಗ್ಗೆ ಕೋಪ ಇಮ್ಮಡಿಸಿತು. ಅವರನ್ನು ಕರೆಯಿಸಿ ಕಮಿಟಿಯ ಜನರಲ್ಲಿ 'ನಿಮ್ಮ ಮಠ, ನಿಮ್ಮ ಪ್ರಸಾದನಿಲಯ ನಿಮಗಿರಲಿ, ನಮ್ಮ ವಿದ್ಯಾರ್ಥಿಗಳನ್ನು ಕರೆದುಕೊಂಡು ನಾವು ದೇಶ ಸಂಚಾರ ಹೋಗುತ್ತೇವೆ' ಎಂದು ಎದ್ದೇಬಿಟ್ಟರು. ಅವರೆಲ್ಲ ಕ್ಷಮೆ ಕೇಳುವಲ್ಲಿ ಈ ಘಟನೆ ಶಾಂತವಾಯಿತು. ಇದು ಮೃತ್ಯುಂಜಯ ಅಪ್ಪಗಳ ವಿದ್ಯಾರ್ಥಿ ವಾತ್ಸಲ್ಯ.

ವಿದ್ಯಾರ್ಥಿಗಳ ನಡೆವಳಿ ನುಡಿವಳಿಗಳನ್ನು ಬಹುಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದರು ಮೃತ್ಯುಂಜಯಪ್ಪಗಳು. ಪ್ರಸಾದ ನಡೆದಾಗ ಒಮ್ಮೆಲೇ ಬಂದು 'ಇವತ್ತು ಯಾರ ಪ್ರಸಾದ' ಎಂದು ಕೇಳುತ್ತಿದ್ದರು. ಒಂದೊಂದು ಕೋಣೆಗೆ ಒಬ್ಬೊಬ್ಬ ಪುರಾತನರ ನಾಮಕರಣ ಮಾಡಲಾಗಿದೆ. ಆ ದಿವಸ ಆ ಕೋಣೆಯ ವಿದ್ಯಾರ್ಥಿಗಳು ಪಾಕಶಾಲೆಯಲ್ಲಿ ಸೇವೆ ಸಲ್ಲಿಸಬೇಕಾಗುತ್ತಿತ್ತು. ಅಂದಿನದು ಆ ಪುರಾತನರ ಪ್ರಸಾದ ; ಆ ಕೋಣೆಯ ವಿದ್ಯಾರ್ಥಿಗಳೇ ಅಂದಿನ ದಾಸೋಹಿಗಳು. ಈ ಅರ್ಥದಲ್ಲಿ ಅಪ್ಪಗಳು 'ಇವತ್ತು ಯಾರ ಪ್ರಸಾದ್ರೆಪಾ' ಎಂದು ಕೇಳುತ್ತಿದ್ದರು. ವಿದ್ಯಾರ್ಥಿಗಳಿಗೆ ಪುರಾತನರ ಬಗ್ಗೆ ಭಕ್ತಿ, ದಾಸೋಹತತ್ವದ ಬಗ್ಗೆ ನಿಷ್ಠೆ ಬೆಳೆಯಬೇಕೆಂಬುದು ಶ್ರೀಗಳವರ ಆಶಯ. ವಿದ್ಯಾರ್ಥಿಗಳು ಕೈಮುಟ್ಟಿ ಕೆಲಸ ಮಾಡಬೇಕೆಂಬ ತತ್ವವೂ ಅವರಲ್ಲಿ ಸೇವಾಮನೋಧರ್ಮ ಬೆಳೆಯಬೇಕೆಂಬ ಭಾವನೆಯೂ ಇಲ್ಲಿದೆ.

ಪ್ರಸಾದದಲ್ಲಿ ಒಂದಗುಳೂ ನೆಲಕ್ಕೆ ಬೀಳಬಾರದೆಂಬುದು ಶರಣರ ಅನುಭವದ ಮಾತು. ಈ ರೀತಿ ವಿದ್ಯಾರ್ಥಿಗಳಿಗೆ ಬೋಧಿಸುತ್ತಿದ್ದುದೂ ಉಂಟು. ಆದರೂ ವಿದ್ಯಾರ್ಥಿಗಳು ವಿದ್ಯಾರ್ಥಿಗಳೇ. ಮರಹು ಆಲಸ್ಯ ಚಾಪಲ್ಯ ಕಾರಣವಾಗಿ ಆಗಾಗ ತಪ್ಪುತ್ತಿದ್ದರು. ಒಮ್ಮೆ ಒಬ್ಬ ವಿದ್ಯಾರ್ಥಿ ಪ್ರಸಾದ ಸ್ವೀಕರಿಸುವಾಗ ಕೆಳಗೆ ಅದನ್ನು ಮನಬಂದಂತೆ ಚೆಲ್ಲಿದ್ದ. ಶ್ರೀಗಳವರು ಅದನ್ನು ದೂರದಿಂದಲೇ ನೋಡಿದ್ದರು. ಅವನು ಪ್ರಸಾದ ಮುಗಿಸಿ ಏಳುವಾಗ ಅಪ್ಪಗಳು ಬಂದು ಕೆಳಗೆ ಬಿದ್ದ ಪ್ರಸಾದವನ್ನೆಲ್ಲ ಆರಿಸಿ

ತಾಟಿನಲ್ಲಿ ಹಾಕಿದರು. ವಿದ್ಯಾರ್ಥಿಗಳಿಗೆ ಇಲ್ಲದ ಭಯ. ಎಲ್ಲರೂ ಗದ್ಗದ ನಡುಗತೊಡಗಿದರು. 'ಶಿವನು ಕೊಟ್ಟ ಪ್ರಸಾದವನ್ನು ಸರಿಯಾಗಿ ಸ್ವೀಕರಿಸಬೇಕೆಂದು' ಹೇಳಿ ಹೊರಟು ಹೋದರು. ಒಮ್ಮೊಮ್ಮೆ ವಿದ್ಯಾರ್ಥಿಗಳ ಆಡಳಿತ ವಿಷಯದಲ್ಲಿ ತಮ್ಮಿಂದ ಆದ ತಪ್ಪನ್ನು ಮನಸಾ ಒಪ್ಪಿಕೊಳ್ಳುತ್ತಿದ್ದರು. ಒಂದುಸಲ ನಡೆದ ಘಟನೆ :

ಮೃತ್ಯುಂಜಯಮಹಾಸ್ವಾಮಿಗಳಿಗೆ ಸಮಯಪ್ರಜ್ಞೆ ತೀವ್ರವಾಗಿದ್ದಿತು. ಏಳುಗಂಟೆಗೆ ಕಾರ್ಯಕ್ರಮವೆಂದರೆ ಒಂದು ನಿಮಿಷ ತಡವಾಗದಂತೆ ಸರಿಯಾದ ಸಮಯಕ್ಕೆ ಸಭೆಗೆ ಬಂದು ಕುಳಿತು ನಾಲ್ಕೇ ಜನರಿದ್ದರೂ ಸಭೆಯನ್ನು ಪ್ರಾರಂಭಿಸಿಬಿಡುತ್ತಿದ್ದರು. ನಿರ್ದಿಷ್ಟ ವೇಳೆಗೆ ಅದು ಮುಗಿಯಲೇಬೇಕು. ಆದರೆ ಅಂದು ಪ್ರಾರಂಭವಾದ ಸಭೆ ಅನಿರೀಕ್ಷಿತವಾಗಿ ಒಂದು ಗಂಟೆ ಮುಂದೆ ಹೋಯಿತು. ದೂರದಲ್ಲಿದ್ದ ಒಬ್ಬ ವಿದ್ಯಾರ್ಥಿ, ಬೇಜಾರದಿಂದ 'ಪರೀಕ್ಷೆ ಹತ್ತಿರ ಬಂದಿದೆ' ಎಂದು ತನ್ನಷ್ಟಕ್ಕೆ ತಾನು ಅಂದುಕೊಂಡುದು ಶ್ರೀಗಳವರಿಗೆ ಕೇಳಿಸಿತು. ಒಮ್ಮೆಲೆ ಎದ್ದು ವಿದ್ಯಾರ್ಥಿಗಳ ನಡುವೆ ಹೋಗಿ 'ನನ್ನದು ತಪ್ಪಾತ್ರೆಪಾ, ಇನ್ನು ಮೇಲೆ ಹೀಗೆ ಮಾಡೂದಿಲ್ಲ, ನೀವೆಲ್ಲ ಕ್ಷಮಿಸಬೇಕು' ಎಂದು ಕೈಮುಗಿದು ಕ್ಷಮೆ ಕೇಳಿಕೊಂಡರು. ಮೃತ್ಯುಂಜಯಸ್ವಾಮಿಗಳು ಯಾವುದನ್ನು ಮಾಡಿದರೂ ಸಹಜಮಾಟವೇ, ತೋರಿಕೆಯಲ್ಲ. ವಿದ್ಯಾರ್ಥಿಗಳು ಅವರ ಅಂತರಂಗವನ್ನು ಅರಿತಿದ್ದರು. ಅವರ ವಾತ್ಸಲ್ಯದ ಹೊಳೆಯಲ್ಲಿ ಈಸಿದ್ದರು. ಹೀಗೆ ಅಲ್ಲಿಯ ದೈನಂದಿನ ಕಾರ್ಯಕ್ರಮಗಳು ನಿರಾಳವಾಗಿ ನಡೆಯುತ್ತಿದ್ದವು. ಆದರೆ ಪ್ರಸಾದನಿಲಯದ ವಿದ್ಯಾರ್ಥಿಗಳಲ್ಲಿ ಒಮ್ಮೆ ಕಾರ್ಯದರ್ಶಿ, ಉಪಕಾರ್ಯದರ್ಶಿಗಳ ಸ್ಥಾನಕ್ಕೆ ಚುನಾವಣೆ ಏರ್ಪಟ್ಟು ಅವರಲ್ಲಿ ಎರಡು ಗುಂಪುಗಳಾಗಿ ನ್ಯಾಯ ಶ್ರೀಗಳ ಸನ್ನಿಧಿಗೆ ಬಂದಿತು. ಅದನ್ನೆಲ್ಲ ಕೇಳಿಕೊಂಡು ಅವರಿಬ್ಬರಲ್ಲಿ ಚಿಕ್ಕವನನ್ನು ಕಾರ್ಯದರ್ಶಿಯಾಗಿ, ದೊಡ್ಡವನನ್ನು ಉಪಕಾರ್ಯದರ್ಶಿಯಾಗಿ ನೇಮಿಸಿದರು. 'ಒಂದಕ್ಕೊಂದು ಹೊಂದಿಕೊಂಡು ಒಂದಾಗುವುದೇ ಧರ್ಮ' ಎಂದು ಧರ್ಮವನ್ನು ವ್ಯಾಖ್ಯಾನಿಸಿದರು. ಇದು ಮೃತ್ಯುಂಜಯಸ್ವಾಮಿಗಳ ಧರ್ಮ, ವಿಶ್ವಧರ್ಮ. ಅಲ್ಲಿ ಸಣ್ಣದು–ದೊಡ್ಡದು, ಪಂಥ–ಪ್ರದೇಶ ಯಾವುದೂ ಇಲ್ಲ.

## ಸಂಸ್ಕೃತ ಪಾಠಶಾಲೆ

ಮೃತ್ಯುಂಜಯಪ್ಪಗಳಿಗೆ ಮುರುಘಾಮಠವು ಆದರ್ಶ ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಕೇಂದ್ರವಾಗಬೇಕೆಂಬುದಾಗಿದ್ದಿತು. ಆ ದಿಸೆಯಲ್ಲಿಯೇ ಅವರು ಅಹರ್ನಿಶಿ ದುಡಿದರು. ಧಾರವಾಡಕ್ಕೆ ಬಂದೊಡನೆಯೇ ಮುರುಘಾಮಠದ ಆವರಣದಲ್ಲಿ ಒಂದು ಸಂಸ್ಕೃತಪಾಠ ಶಾಲೆಯನ್ನು ಪ್ರಾರಂಭಿಸಿದರು. ಕಾಶಿಯಲ್ಲಿ ಓದಿದ ಮಹಾದೇವಶಾಸ್ತ್ರಿಗಳು, ಸದಾಶಿವಶಾಸ್ತ್ರಿಗಳು, ಬಸವಲಿಂಗಶಾಸ್ತ್ರಿಗಳು ಮೊದಲಾದ ಸಂಸ್ಕೃತವಿದ್ವಾಂಸರು ಇಲ್ಲಿ ಬೋಧಕರಾಗಿದ್ದರು. ಈ ಪಾಠಶಾಲೆಯನ್ನು ಶ್ರೀಗಳು ಒಂದು ಕಾಲಕ್ಕೆ ಸಂಸ್ಕೃತ ಕಾಲೇಜಾಗಿ ಪರಿವರ್ತನೆ ಮಾಡಿ, ಕಾಲೇಜಿನಲ್ಲಿ ಓದುವ ವಿದ್ಯಾರ್ಥಿಗಳಿಗೂ ಸಂಸ್ಕೃತ ಅಭ್ಯಾಸದ ಅವಕಾಶವನ್ನು ಕಲ್ಪಿಸಿಕೊಟ್ಟರು. ಪ್ರಾಚೀನ–ನೂತನಗಳ ಸಮನ್ವಯದಿಂದ ಪ್ರಗತಿಯಾಗಬೇಕೆಂಬುದು ಮೃತ್ಯುಂಜಯ ಮಹಾಸ್ವಾಮಿಗಳ ಇಚ್ಛೆಯಾಗಿದ್ದಿತು. ಇಂಗ್ಲಿಷ್ ಕಲಿಯುವ ವಿದ್ಯಾರ್ಥಿಗಳು ಸಂಸ್ಕೃತವನ್ನು ಕಲಿತರೆ ಅವರಿಗೆ ನಮ್ಮ ಪ್ರಾಚೀನ ಪರಂಪರೆಯ ಭದ್ರಬುನಾದಿ ದೊರೆಯುತ್ತದೆ ಎಂಬ ವಿಚಾರ ಅವರದು. ಅದನ್ನು ಸರಿಯಾಗಿ ಅವರು ಕೃತಿಯಲ್ಲಿಯೂ ಇಳಿಸಿದರು. ಯಾವುದಾದರೂ ಸಭೆ ಸಮಾರಂಭದಲ್ಲಿ ಇಬ್ಬರು ಆಧುನಿಕ ಶಿಕ್ಷಣದ ಪ್ರಾಧ್ಯಾಪಕರಿದ್ದರೆ, ಒಬ್ಬರು ಶಾಸ್ತ್ರಿಗಳನ್ನು ತಪ್ಪದೆ ಭಾಷಣಕಾರರನ್ನಾಗಿ ಅಲ್ಲಿ ಸೇರಿಸುತ್ತಿದ್ದರು. ಸಭಿಕರಿಗೆ ಹಳೆ ಹೊಸ ವಿಚಾರಗಳೆರಡೂ ಪರಿಚಯವಾಗಬೇಕೆಂದು ಅವರು ಅನ್ನುತ್ತಿದ್ದರು. ಈ ಮಾರ್ಗದಲ್ಲಿಯೇ ಮುನ್ನಡೆದು ಅವರು ಸಂಸ್ಕೃತ ವಿದ್ವಜ್ಜನ ಪರಿಷತ್ತು ಹಾಗೂ ಸಾಹಿತ್ಯ ಪರಿಷತ್ತು ಎರಡನ್ನೂ ನಡೆಸುತ್ತ ಬಂದರು.

## ಬೆಳ್ಳಿಹಬ್ಬ

ಪ್ರಸಾದನಿಲಯ ಪ್ರಾರಂಭವಾಗಿ, ಅಂದರೆ ಮೃತ್ಯುಂಜಯಸ್ವಾಮಿಗಳು ಧಾರವಾಡಕ್ಕೆ ದಯಮಾಡಿಸಿ ೨೫ ವರ್ಷಗಳಾದವು. ಈ ಅವಧಿಯಲ್ಲಿ ಮೃತ್ಯುಂಜಯಸ್ವಾಮಿಗಳ ಹೆಸರು ಅಖಂಡ ಕರ್ನಾಟಕವನ್ನು ವ್ಯಾಪಿಸಿತ್ತು. ಆಚೆಗೆ ಮಹಾರಾಷ್ಟ್ರ, ಆಂಧ್ರಪ್ರದೇಶಗಳ ವರೆಗೂ ಹರಡಿದ್ದಿತು.

ಸಮಾಜದಲ್ಲಿ ನವಚೈತನ್ಯವನ್ನುಂಟುಮಾಡುವಂತೆ ಒಂದು ಬೆಳ್ಳಿಹಬ್ಬವನ್ನು ಆಚರಿಸಬೇಕೆಂದು ನಿರ್ಣಯವಾಯಿತು. ಆಗ ಬಸವನಾಳ, ನಂದೀಮಠ, ಬುದ್ಧಯ್ಯ ಪುರಾಣಿಕ, ಜಿ.ಎ. ಹಿರೇಮಠ ಮೊದಲಾದವರು ಶ್ರೀಗಳವರ ನಿಕಟವರ್ತಿಗಳಾಗಿ ರಜತೋತ್ಸವದ ಯೋಜನೆಯನ್ನು ಹಮ್ಮಿಕೊಂಡರು. ಕರ್ನಾಟಕಾಂಧ್ರ ಮಹಾರಾಷ್ಟ್ರ ಪ್ರಾಂತಗಳಿಂದ ವೀರಶೈವ ವಿದ್ವಜ್ಜನರಿಗೆ ಆಹ್ವಾನಗಳು ಹೋದವು. ಜನರು ಸಹಸ್ರಾರು ಸಂಖ್ಯೆಯಲ್ಲಿ ಧಾರವಾಡಕ್ಕೆ ಬಂದರು. ವೀರಶೈವ ಸಾಹಿತ್ಯಸಮ್ಮೇಲನ, ಶಿವಾನುಭವ ಸಮ್ಮೇಲನ, ಕಲಾಪ್ರದರ್ಶನ, ಸಂಗೀತವಾದ್ಯಗೋಷ್ಠಿ ಹೀಗೆ ವೈಭವಪೂರ್ಣವಾದ ಉತ್ಸವ ಜರುಗಿತು. ಅಥಣಿ ಶಿವಯೋಗಿಗಳ ಯಾತ್ರಾಮಹೋತ್ಸವವೂ ನೆರವೇರಿತು. ಈ ಬೆಳ್ಳಿಹಬ್ಬ ಮುರುಘಾಮಠಕ್ಕೆ ಹೊಸ ಆಯಾಮಗಳನ್ನು ಕಲ್ಪಿಸಿಕೊಟ್ಟಿತು. (೧) ವೀರಶೈವ ಸಾಹಿತ್ಯವನ್ನು ಕುರಿತು ಸಂಶೋಧನೆ, ಪ್ರಕಟನೆ, ಪ್ರಸಾರ ಇವು ವ್ಯವಸ್ಥಿತವಾಗಿ ಸಾಗುವಂತೆ ಮುರುಘಾಮಠವು ಏರ್ಪಾಟು ಮಾಡಬೇಕು, (೨) ವೀರಶೈವ ಧರ್ಮ, ತತ್ವ, ಸಂಸ್ಕೃತಿ ಇವುಗಳ ಪರಿಚಯ, ಪ್ರಸಾರ ನಾಡಿನ ತುಂಬ ನಡೆಯಬೇಕು, (೩) ವೀರಶೈವ ಕಲೆ, ಕಲಾವಿದರ ಪೋಷಣೆ, ಪ್ರೋತ್ಸಾಹಕ್ಕೋಸುಗ ಸಮಾರಂಭಗಳು ನಡೆಯಬೇಕು ಎಂಬ ನಿರ್ಣಯಗಳು ಸ್ವೀಕೃತವಾದವು. ಯಾವುದೇ ಸಭೆಯಲ್ಲಿ ಕೈಕೊಂಡ ನಿರ್ಣಯಗಳು ಕೇವಲ ಕಾಗದದ ಮೇಲೆ ಉಳಿಯುತ್ತವೆ ; ಕೃತಿಗಿಳಿಯುವುದಿಲ್ಲ. ಇದು ಬಹುಜನರ ಅನುಭವಕ್ಕೆ ಬಂದ ಮಾತು. ಆದರೆ ಮೃತ್ಯುಂಜಯಸ್ವಾಮಿಗಳ ಮಾತು ಬೇರೆ. ಅವರಿಗೆ ವಿಚಾರ, ಆಚಾರ ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಕ್ರಿಯಾಜ್ಞಾನ ಸಾಮರಸ್ಯವನ್ನು ಪಡೆದ ಮಹಾನುಭಾವರ ಮಾತೇ ಹಾಗೆ. ಒಂದು ವಿಚಾರ ಮನಸ್ಸಿನಲ್ಲಿ ಬಂದರೆ ಅದರ ಬಗ್ಗೆ ಹೊಯ್ದಾಟವಿಲ್ಲ ; ಡೋಲಾಯಮಾನ ಸ್ಥಿತಿಯಿಲ್ಲ. ಮಾತು ಕೃತಿಗಿಳಿಯಬೇಕು. ರಜತೋತ್ಸವದ ನಿರ್ಣಯಗಳೆಲ್ಲ ಕೃತಿಗಿಳಿದವು. ಮೃತ್ಯುಂಜಯಮಹಾಸ್ವಾಮಿಗಳ ಸಮಗ್ರ ಆಯುಷ್ಯವೇ ಈ ನಿರ್ಣಯಗಳ ಅನುಷ್ಠಾನಕ್ಕಾಗಿ ಮೀಸಲಾದಂತಾಯಿತು.

## ಶಿವಯೋಗಿಗಳ ರಥೋತ್ಸವ

ನಮ್ಮಲ್ಲಿ ಜಾತ್ರೆ, ತೇರು, ಉತ್ಸವ ಬೇಕಾದಷ್ಟು ನಡೆಯುತ್ತವೆ.

ಜಾತ್ರೆಗಳಿಲ್ಲದ ಊರಿಲ್ಲವೆಂದರೂ ಸಲ್ಲುವುದು. ಅವುಗಳಿಗೆ ಒಂದು ಬಗೆಯ ಧಾರ್ಮಿಕ ಭಾವನೆ, ಸಾಂಸ್ಕೃತಿಕ ಆವಶ್ಯಕತೆ ಪ್ರೇರಕವಾಗಿರುವುದು ನಿಜ. ಧಾರವಾಡದ ಮುರುಘಾಮಠದಲ್ಲಿ ನೆರವೇರುವ ಶಿವಯೋಗಿಗಳ ರಥೋತ್ಸವ ಒಂದು ವಿಶಿಷ್ಟ ತೆರನಾದ ಸಾಂಸ್ಕೃತಿಕ ಉತ್ಸವ. ಅಲ್ಲಿ ಧಾರ್ಮಿಕ, ಭಾಕ್ತಿಕ ಅಂಶಗಳಿವೆ. ಆದರೆ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಿಗೇ ಹೆಚ್ಚಿನ ಪ್ರಾಶಸ್ತ್ಯವಿದೆ. ಉತ್ಸವದ ದಿನ ಸಮೀಪಿಸುತ್ತಿದ್ದಂತೆಯೇ ಎಲ್ಲ ಊರಿನ ಮಹಾಸ್ವಾಮಿಗಳಿಗೂ ಸದ್ಭಕ್ತರಿಗೂ ಸಾಹಿತಿಗಳಿಗೂ ಕಲಾವಿದರಿಗೂ ಆಹ್ವಾನಗಳು ಹೋಗುತ್ತವೆ—ತಂದೆತಾಯಿಗಳು ಮಕ್ಕಳಿಗೆ ಹಬ್ಬಕ್ಕೆ ಬರಲು ಬರೆದಂತೆ. ಹುಟ್ಟಿದ ಮನೆಗೆ ಬರುವ ಸಂಭ್ರಮದಿಂದ ಅವರೆಲ್ಲರ ಆಗಮನ, ಶ್ರೀಮಠಕ್ಕೆ. ಮೂಲ ಚಿತ್ರದುರ್ಗಪೀಠದ ಜಗದ್ಗುರುಗಳು ಎಲ್ಲಿದ್ದರೂ ಆಗ ದಯಮಾಡಿಸಬೇಕು. ಎಲ್ಲರ ಪೂಜೆ ಪ್ರಸಾದಗಳಿಗೆ ಲವಲೇಶ ಕೊರತೆ ಇಲ್ಲದಂತೆ ಏರ್ಪಾಟು. ಧಾರವಾಡದ 'ಸಾಂಸ್ಕೃತಿಕ ಜೀವನ'ದಲ್ಲಿ ಮುರುಘಾಮಠದ ಈ ಉತ್ಸವಗಳಿಗೆ ಸಿಂಹಪಾಲು ಸಲ್ಲುತ್ತದೆ. ಇವು ಧಾರವಾಡದ ಸಾಂಸ್ಕೃತಿಕ ಪ್ರವಾಹದ ದೊಡ್ಡ ನೆಲೆಗಳಾದವು. ವಿದ್ವಾಂಸರ ಭಾಷಣಗಳು, ಸಾಹಿತ್ಯ–ಸಂಸ್ಕೃತಿ ವಿಷಯದ ಚರ್ಚೆಗಳು, ಸಂಗೀತ–ವಾದ್ಯ ಸಮ್ಮೇಳನಗಳು, ಜಾನಪದ ಹಾಡುಗಳು, ಎಲ್ಲಕ್ಕೂ ಮೇಲಾಗಿ ಮೃತ್ಯುಂಜಯ ಮಹಾಸ್ವಾಮಿಗಳ ಭಜನೆ—ಇವು ಜನತೆಯನ್ನು ಮಂತ್ರಮುಗ್ಧರನ್ನಾಗಿ ಮಾಡುತ್ತಿದ್ದವು. ತೇರು ಸಾಗುತ್ತದೆ. ಭಜನೆ ಪ್ರಾರಂಭವಾಗುತ್ತದೆ. ಮೃತ್ಯುಂಜಯಪ್ಪಗಳಿಗೆ ಭಕ್ತಿಯ ಪಾರವಶ್ಯತೆ ಬರುತ್ತದೆ. 'ಜಯಜಯ ಬಸವ ಜಯಜಯ ಬಸವ' ಎಂದು ಹಾಡುತ್ತ ಕುಣಿಯುತ್ತ ಭಾವಪರವಶರಾಗಿ ಜನಸ್ತೋಮದೊಂದಿಗೆ ಅಪ್ಪಗಳು ಸಾಗುತ್ತಿದ್ದ ದೃಶ್ಯವನ್ನು ನೋಡಲಿಕ್ಕೆ ಎರಡು ಕಣ್ಣುಗಳು ಸಾಲವು. ಆಮೇಲೆ ಸಾಂಸ್ಕೃತಿಕ ಕಾರ್ಯಕ್ರಮಗಳು. ಒಂದು ಮತದವರಲ್ಲ, ಒಂದು ಭಾಗದವರಲ್ಲ. ಎಲ್ಲ ಮತೀಯರಿಗೆ, ಎಲ್ಲ ಪ್ರಾದೇಶಿಕ ವಿಭಾಗಗಳಿಗೆ ಅಲ್ಲಿ ಸ್ಥಾನ, ಗೌರವ. ಕೊನೆಗೆ ಮೃತ್ಯುಂಜಯ ಮಹಾಸ್ವಾಮಿಗಳು ಮಂಗಲಮಾಡುವುದೆಂದರೆ ಗೀತೋಪದೇಶವಾದಂತೆ. 'ಕಾಡಲೇಕೆ ನರರುಗಳನು' ಎಂದು ಹಾಡಿದರೆ ಅವರ ಕಂಠಶ್ರೀಯಿಂದ ಜಡಕ್ಕೆ ಚೈತನ್ಯ ಪ್ರಾಪ್ತವಾಗಬೇಕು. ಉಪದೇಶದ ನಾಲ್ಕು ಮಾತುಗಳೆಂದರೆ ಶಾಶ್ವತ ವಾಕ್ಯಗಳಿದ್ದಂತೆ. 'ಎಲ್ಲರೂ ತಂತಮ್ಮ ಧರ್ಮದ ಆಚರಣೆಯಂತೆ

ನಡೆಯಬೇಕು. ಆಯಾ ದೇವ ದೇವತೆಗಳನ್ನು ಅವರವರು ಪೂಜಿಸಲಿ. ಸ್ವಧರ್ಮದಲ್ಲಿ ನಿಷ್ಠೆ, ಪರಧರ್ಮದಲ್ಲಿ ಸಹಿಷ್ಣುತೆ. ಇವು ನಮ್ಮೆಲ್ಲರ ಬಾಳಿನ ಬುತ್ತಿಯಾಗಬೇಕು.' ಇಂತಹ ಅಣಿಮುತ್ತುಗಳನ್ನು ಕೇಳಿದ ಜನ ಬೆರಗಾಗುತ್ತಿದ್ದರು. ಶ್ರೀಗಳವರ ದೃಷ್ಟಿ ಎಷ್ಟು ವಿಶಾಲವಾಗಿದೆ ಎಂಬುದನ್ನು ಕಂಡುಕೊಳ್ಳುತ್ತಿದ್ದರು. ಹೀಗೆ ಈ ಉತ್ಸವಗಳು ವರುಷವರುಷ ನೆರವೇರತೊಡಗಿದವು. ವೀರಶೈವ ಸಾಹಿತ್ಯ, ಧರ್ಮ, ತತ್ವಗಳ ವಿವೇಚನೆ ಅಲ್ಲಿಯ ಪ್ರಸ್ತುತ ವಿಷಯವಾದರೂ ಸರ್ವಮಾನ್ಯ ವಿಚಾರಗಳಿಗೆ ಅಲ್ಲಿ ಪ್ರಮುಖ ಸ್ಥಾನವಿದ್ದುದರಿಂದ ಎಲ್ಲರೂ ಅವುಗಳನ್ನು ಮೆಚ್ಚತೊಡಗಿದರು. 'ವೀರಶೈವಸಾಹಿತ್ಯ ಸಮ್ಮೇಳನ' ಎಂಬ ವಿಚಾರ ಬೆಳ್ಳಿಹಬ್ಬದ ಕಾಲಕ್ಕೆ ಮೂಡಿ ಬಂದಾಗ, ಕನ್ನಡ ಸಾಹಿತಿಗಳಲ್ಲಿ ಕೆಲವರು, ಕನ್ನಡ ಸಾಹಿತ್ಯ ಸಮ್ಮೇಲನವೇ ಇರುವಾಗ ಪ್ರತ್ಯೇಕ ವೀರಶೈವ ಸಾಹಿತ್ಯ ಸಮ್ಮೇಲನವೇಕೆ ? ಎಂದು ಕೇಳಿದ್ದುಂಟು. 'ವೀರಶೈವ ಒಂದು ಜಾತಿಯಲ್ಲ, ಅದು ಒಂದು ತತ್ವಪ್ರಣಾಲಿ. ಎಲ್ಲ ಜಾತಿಗಳನ್ನೂ ತನ್ನಲ್ಲಿ ಬರಮಾಡಿಕೊಂಡ ಅದಕ್ಕೆ ವಿಶಿಷ್ಟವಾದ ಮೌಲ್ಯಗಳಿವೆ. ಸಾಹಿತ್ಯವಿದೆ, ಸಂಸ್ಕೃತಿ ಇದೆ. ಆದುದರಿಂದ ವೀರಶೈವ ಮಹಾಸಭೆ, ವೀರಶೈವ ಸಾಹಿತ್ಯಸಮ್ಮೇಲನ ಇವುಗಳ ಆವಶ್ಯಕತೆಯಿದೆ' ಎಂದು ಆಗ ಸಮರ್ಥನೆ ಮಾಡಿಕೊಳ್ಳುವ ಪ್ರಸಂಗವಿದ್ದಿತು. ಒಂದೆರಡು ಉತ್ಸವಗಳು ಆಗುವಷ್ಟರಲ್ಲಿ ಜನತೆಗೆ ಈ ವಿಶಾಲಮನೋಭೂಮಿಕೆಯ ಅರ್ಥವಾಗತೊಡಗಿತು. ಬಸವಾದಿ ಪ್ರಮಥರ ಭಕ್ತಿಜ್ಞಾನವೈರಾಗ್ಯಗಳ ಸಾಕಾರಮೂರ್ತಿ ಎನಿಸಿದ್ದ ಮೃತ್ಯುಂಜಯಪ್ಪಗಳ ನೇತೃತ್ವ ಕಾರಣವಾಗಿ ಇಂತಹ ತಪ್ಪುಕಲ್ಪನೆಗಳೆಲ್ಲ ಬೇಗನೇ ಮಾಯವಾಯಿತು. ಹೀಗಾಗಿ ಮೃತ್ಯುಂಜಯಸ್ವಾಮಿಗಳ ಅಖಂಡ ವಾಣಿಯನ್ನು ಕೇಳಲು ಪರಮತದ ಅನೇಕ ಪ್ರತಿಷ್ಠಿತರು ಮಠಕ್ಕೆ ಬರತೊಡಗಿದರು. ಹೀಗೆ ಮುರುಘಾಮಠದ ರಥೋತ್ಸವ ಸಾಮಾನ್ಯ ಜನತೆಯ ವರೆಗೆ ಸಾಹಿತ್ಯ, ಧರ್ಮ, ಸಂಸ್ಕೃತಿ ವಿಚಾರಗಳನ್ನು ತೆಗೆದುಕೊಂಡು ಹೋಗಲು ಅನುವಾದವು. ಶರಣಧರ್ಮ ಮತ್ತೆ ಉಳಿಯುವಂತಾಯಿತು.

ಸಾಹಿತ್ಯೋತ್ಸವದ ಜೊತೆಗೆ ಸಂಗೀತೋತ್ಸವವೂ ನಡೆಯತೊಡಗಿತು. ಆಗ ಶ್ರೀಮಠದ ಸಾಂಸ್ಕೃತಿಕ ಕಾರ್ಯಗಳಿಗೆ ಶ್ರೇಷ್ಠ ಸಲಹೆಗಾರರೆಂದರೆ ಬಸವನಾಳರು. ಮೃತ್ಯುಂಜಯಪ್ಪಗಳು ಹಾಗೂ ಬಸವನಾಳರ ಪ್ರಭಾವದಿಂದ ಮಲ್ಲಿಕಾರ್ಜುನ ಮನ್ಸೂರರಂತಹ ಶ್ರೇಷ್ಠ ಸಂಗೀತಜ್ಞರು

ಮುರುಘಾಮಠದ ವಲಯದಲ್ಲಿ ಬರುವಂತಾಯಿತು. ಸ್ವತಃ ಮನ್ಸೂರ ಅವರೇ ಅನೇಕಸಲ ಹೇಳುತ್ತಾರೆ : "ಮೃತ್ಯುಂಜಯಸ್ವಾಮಿಗಳ ಮತ್ತು ಅಥಣಿ ಶಿವಯೋಗಿಗಳ ಪ್ರಭಾವದಿಂದ ನನ್ನ ಜೀವನದ ಹಾಗೂ ನನ್ನ ಸಂಗೀತಜೀವನದ ದಿಸೆಗಳು ಸಂಪೂರ್ಣ ಹೊಸಹಾದಿಯನ್ನು ಹಿಡಿದವು. ನಾನು ಕರ್ನಾಟಕವನ್ನು ಬಿಟ್ಟು ಹೋಗದೇ ಧಾರವಾಡದಲ್ಲಿಯೇ ಸ್ಥಿರವಾಗಿ ನಿಂತುದು ಈ ಪ್ರಭಾವದ ಮೂಲಕ. ಈ ಭಾಗದಲ್ಲಿ ಆಗ ಸಂಗೀತಕ್ಕೆ ಹೆಚ್ಚಿನ ಪ್ರೋತ್ಸಾಹವೇ ಇರಲಿಲ್ಲ. ಮುಂಬೈ, ಪುಣೆ ಹಾಗೂ ಉತ್ತರ ದೇಶಗಳಲ್ಲಿ ಹೆಚ್ಚಿನ ಪ್ರೋತ್ಸಾಹವಿತ್ತು. ಇಲ್ಲಿ ಉದರ ಪೋಷಣೆಗೆ ಸಹ ಕಠಿಣಕಾಲವಿದ್ದರೂ ಭಕ್ತಿ ನನ್ನನ್ನು ಸೆಳೆದು ನಿಲ್ಲಿಸಿತು. ಆ ಭಕ್ತಿ ನನ್ನ ಸಂಗೀತಕ್ಕೆ, ನನ್ನ ಜೀವನಕ್ಕೆ ಹೊಸ ಕಳೆಕೊಟ್ಟಿತು." ಮನ್ಸೂರರಂಥ ಮಹಾಸಂಗೀತಗಾರರು ಧಾರವಾಡದಲ್ಲಿಯೇ ಉಳಿದು, ಮುರುಘಾಮಠದ ಉತ್ಸವದಲ್ಲಿ ತಪ್ಪದೇ ಭಾಗವಹಿಸುತ್ತಿದ್ದುದರಿಂದ ಅಲ್ಲಿಯ ಸಂಗೀತಾರಾಧನೆಗೆ ಒಂದು ಔನ್ನತ್ಯ ಪ್ರಾಪ್ತವಾಯಿತು. ಸ್ವತಃ ಮೃತ್ಯುಂಜಯಪ್ಪಗಳಿಗೇ ಸಂಗೀತದಲ್ಲಿ ವಿಶೇಷ ಆಸಕ್ತಿಯಿತ್ತು. ರಾಗ ತಾಳ ಲಯ ಜ್ಞಾನವಿತ್ತು. ಅವರ ಕಂಠದಲ್ಲಿ ಮಾಧುರ್ಯವಿತ್ತು. ಅಖಂಡ ಅವಿಭಕ್ತಜ್ಞಾನಿಗೆ ಯಾವುದರ ಅರಿವಿರುವುದಿಲ್ಲ ? ಹೀಗಿತ್ತು ಮೃತ್ಯುಂಜಯಪ್ಪಗಳ ಸ್ಥಿತಿ. ಈ ದಿಸೆಯಲ್ಲಿ ಜೋಳದರಾಶಿ ದೊಡ್ಡನಗೌಡರ ಸೇವೆಯನ್ನು ಮರೆಯುವಂತಿಲ್ಲ. ತಮ್ಮ ಕಂಠಶ್ರೀಮಂತಿಕೆಯನ್ನೇ ಮೃತ್ಯುಂಜಯ ಸೇವೆಗೆ ಇವರು ಧಾರೆಯೆರೆದರು. ಶ್ರೀಮಠದಲ್ಲಿ ಶೂನ್ಯಸಂಪಾದನೆ ಮೊದಲಾದ ವೀರಶೈವ ಕೃತಿಗಳ ಗಮಕ ನಡೆಸಿ ಈ ಸಾಹಿತ್ಯದ ಸತ್ವವನ್ನು ಸಾರ್ವಜನಿಕರಿಗೆ ಉಣಬಡಿಸಿದರು.

ಒಮ್ಮೆ ಮೃತ್ಯುಂಜಯ ಮಹಾಸ್ವಾಮಿಗಳ ೭೫ನೆಯ ವರ್ಧಂತ್ಯುತ್ಸವ. ಬಹುದೊಡ್ಡ ಸಮಾರಂಭ. ಆಗ ಕೂಡಿದ ಭಕ್ತಾದಿಗಳು ದೊಡ್ಡ ಪ್ರಮಾಣದಲ್ಲಿ ತಮ್ಮ ತಮ್ಮ ಕಾಣಿಕೆಗಳನ್ನು ತಂದು ಮೃತ್ಯುಂಜಯಪ್ಪಗಳ ಮುಂದಿಟ್ಟರು. ಮಲ್ಲಿಕಾರ್ಜುನ ಮನ್ಸೂರ ಮೊದಲಾದ ಸಂಗೀತಜ್ಞರ ಸಂಗೀತ ಕಾರ್ಯಕ್ರಮಗಳೂ ಆದವು. ಕೊನೆಗೆ ಮೃತ್ಯುಂಜಯಪ್ಪಗಳು ಮಂಗಲಭಾಷಣದಲ್ಲಿ ಬೊಗಸೆ ಬೊಗಸೆ ತುಂಬ ಆ ರೂಪಾಯಿಗಳನ್ನೆಲ್ಲ ಅಲ್ಲಿ ಕುಳಿತ ಕಲಾವಿದರಿಗೆ ಹಂಚಿಬಿಟ್ಟರು. ಮುಂದಿಟ್ಟ ತಟ್ಟೆಯಲ್ಲಿ ಒಂದೇ ರೂಪಾಯಿ ಉಳಿಯಿತು. ಅದನ್ನು ಮಹಾಂತಪ್ಪಗಳಿಗೆ ಕೊಟ್ಟರು.

ಇಂತಹ ನಿಸ್ಪೃಹಭಾವದಿಂದ ಮುರುಘಾಮಠದ ಕಾರ್ಯಕ್ರಮಗಳನ್ನು ಪೂರೈಸಿದರು. ಹೀಗಾಗಿ ಧಾರವಾಡದ ಈ ರಥೋತ್ಸವ ಅಖಿಲ ಕರ್ನಾಟಕದ ರಥೋತ್ಸವವಾಯಿತು. ಉತ್ಸವ ಮುಗಿದೊಡನೆ ಹೊರಡಲು ಅಪ್ಪಣೆ ಕೊಡಬೇಕೆಂದು ದೂರದಿಂದ ಆಗಮಿಸಿದ ಭಕ್ತರು–ಸ್ವಾಮಿಗಳು ಬಿನ್ನವಿಸಿದಾಗ, 'ಈಗ, ನಾಳೆ, ನಾಡಿದು, ನಾಲ್ಕು ದಿನವಾಗಲಿ' ಎಂದು ಅವರನ್ನು ಪ್ರೀತಿಯಿಂದ ಉಳಿಸಿಕೊಳ್ಳುತ್ತಿದ್ದರು. ಅವರೆಲ್ಲರಿಗೆ ತೃಪ್ತಿಯಾಗುವಂತೆ ಪ್ರಸಾದ, ಆಶೀರ್ವಾದಗಳನ್ನಿತ್ತು ನಮಸ್ಕರಿಸುತ್ತಿದ್ದರು ; ಹರಸುತ್ತಿದ್ದರು. ಈ ಜಾತ್ರೆ ಮುಗಿದ ಮೇಲೆ ಮುಳಗುಂದ, ಉಳವಿ, ಅಥಣಿ ಮೊದಲಾದ ಕಡೆಗೆ ಯಾತ್ರೆ ಪ್ರಾರಂಭವಾಗುತ್ತಿತ್ತು. ಎಲ್ಲಿ ಹೋದರೂ ಪ್ರವಚನ, ವ್ಯಾಖ್ಯಾನ, ಧರ್ಮಬೋಧೆ ನಡೆಯಲೇಬೇಕು. ಉಳವಿಯಂಥ ದಟ್ಟಾರಣ್ಯದ ಮಧ್ಯದಲ್ಲಿ ಇಂತಹ ಕಾರ್ಯಕ್ರಮ ನಡೆಸಿ ಜನಜಾಗೃತಿಯನ್ನುಂಟುಮಾಡಿದರು. ಯಾರೇ ಮಾತಾಡಲಿ, ಅಲ್ಲಿ ಶರಣರ, ದೇವರ, ಭಕ್ತಿಯ, ಶುದ್ಧ ನಡೆ–ನುಡಿಯ ವಿಚಾರವಿದ್ದರೆ ಆ ಮಾತುಗಳನ್ನು ಮೃತ್ಯುಂಜಯಮಹಾಸ್ವಾಮಿಗಳು ತದೇಕ ಚಿತ್ತರಾಗಿ ಲಾಲಿಸುತ್ತಿದ್ದರು. ಶರಣರೇ ಹೇಳುತ್ತಿರುವರೆಂಬ ಭಾವನೆ ಅವರದಾಗಿದ್ದಿತು.

ವಿದ್ಯಾರ್ಥಿಗಳನ್ನು ಪ್ರವಾಸಕ್ಕೆಂದು ಪುಣ್ಯಕ್ಷೇತ್ರಗಳಿಗೆ ಕರೆದುಕೊಂಡು ಹೋಗುತ್ತಿದ್ದ ಶ್ರೀಗಳು ಇಂಥ ಪ್ರಸಂಗಗಳಲ್ಲಿ ಧರ್ಮ ಬೋಧನೆಗೂ ಅವಕಾಶ ಮಾಡಿಕೊಡುತ್ತಿದ್ದರು. ಈಗ ಸೌಕರ್ಯವಿದ್ದರೆ ರೈಲು. ಮೋಟಾರುಗಳ ಮುಖಾಂತರ, ಇಲ್ಲದಿದ್ದರೆ ೮–೧೦ ಮೈಲು ಕಾಲುನಡಿಗೆಯಿಂದ ಪ್ರವಾಸ ಮಾಡುತ್ತಿದ್ದರು. ಆಗ ವಿದ್ಯಾರ್ಥಿಗಳು ಎರಡು ಸಾಲಾಗಿ ನಡೆಯುತ್ತಿದ್ದರು. ತಾವು ಮುಂದೆ ಸಾಗುತ್ತಿದ್ದರು. ವಚನ, ಭಜನೆಹಾಡು ಹೇಳುತ್ತ, ಜಯ ಜಯಕಾರ ಮಾಡುತ್ತ ಊರು ಪ್ರವೇಶ ಮಾಡುತ್ತಿದ್ದರು. ಆಯಾ ಊರುಗಳಲ್ಲಿ ಯಥಾಸ್ಥಿತಿ ಕಾರ್ಯಕ್ರಮ. ಹೀಗೆ ಮೃತ್ಯುಂಜಯಸ್ವಾಮಿಗಳು ಕರ್ನಾಟಕದ ತುಂಬ ಸಂಚರಿಸಿದರು ; ಧರ್ಮಬೋಧೆ ಮಾಡಿದರು. ಜನರಲ್ಲಿ ಜಾಗೃತಿಯನ್ನುಂಟುಮಾಡಿದರು.

# ಸಾಹಿತ್ಯ ಪ್ರಕಟನೆ

ಸಾಹಿತ್ಯ ಸಂಶೋಧನೆ, ಪ್ರಕಟನೆ, ಪ್ರಸಾರಗಳ ಬಗೆಗೆ ಶಾಶ್ವತ ಯೋಜನೆಯಾಗಬೇಕೆಂದು ರಜತೋತ್ಸವ ಸಂದರ್ಭದಲ್ಲಿ ನಿರ್ಣಯಿಸಲಾಗಿದ್ದಿತು. ಇದರ ಫಲವಾಗಿ 'ಶ್ರೀ ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆ' ಮುರುಘಾಮಠದಲ್ಲಿ ಪ್ರಾರಂಭವಾಯಿತು. ಇಟ್ಟ ಹೆಸರು ಬಾಲಲೀಲಾ ಮಹಾಂತಶಿವಯೋಗಿಗಳದು. ಅವರು ಲೀಲಾಮೂರ್ತಿಗಳು. ಅಮರ ಗೀತೆಗಳನ್ನು ನಿರ್ಭರಭಕ್ತಿಯಿಂದ ಹಾಡಿದವರು. ಮಾಲೆಗೆ ಆಶೀರ್ವಾದ ಮಾಡಿದ ಶ್ರೀ ಮೃತ್ಯುಂಜಯಸ್ವಾಮಿಗಳು ಸಮಾಜದಲ್ಲಿ ಶಿವನನ್ನು ಕಂಡವರು. ಅಂದಮೇಲೆ ಅದರ ಪ್ರಗತಿಯ ವಿಷಯಕ್ಕೆ ಎರಡು ಮಾತಿಲ್ಲ. ಈ ನಾಲ್ಕು ದಶಕಗಳಲ್ಲಿ ೧೦೮ ಗ್ರಂಥಗಳು ಪ್ರಕಟವಾಗಿವೆ.

ಜನ ಬದುಕಬೇಕೆಂದು ಪ್ರಗತಿಗಾಮಿ ಶರಣರು, ಕವಿಗಳು ರಚಿಸಿದ ಕೃತಿಗಳು ಪ್ರತಿಗಾಮಿಗಳ ಕ್ರೂರದಾಳಿಗಳನ್ನು ಎದುರಿಸಬೇಕಾಯಿತು. ಇವುಗಳ ಸಂರಕ್ಷಣೆಗಾಗಿ ವೈಯಕ್ತಿಕವಾಗಿ ಸಾಮೂಹಿಕವಾಗಿ ಪ್ರಾಚೀನ ವೀರಶೈವರು ಮಾಡಿದ ಪ್ರಯತ್ನ ಉಲ್ಲೇಖನೀಯವಾಗಿದೆ. ಇಷ್ಟಾಗಿಯೂ ವೀರಶೈವಸಾಹಿತ್ಯಕ್ಕೆ ದುರ್ದೆಸೆ ತಪ್ಪಲಿಲ್ಲ. ಇಂಥ ವಿಪರೀತ ಪರಿಸ್ಥಿತಿಯಲ್ಲಿಯೂ ಉಳಿದು ಬಂದ ಸಾಹಿತ್ಯ ಹುಳುಗಳ ಬಾಯಿಗೆ ತುತ್ತಾಗುತ್ತ ನಡೆದಿದ್ದಿತು. ಈ ಸ್ಥಿತಿಯಲ್ಲಿ ಪ್ರಾಚೀನ ಗ್ರಂಥಗಳ ಸಂಶೋಧನೆ, ಪ್ರಕಟನೆ ಅತ್ಯಗತ್ಯವಾಗಿದ್ದಿತು. ಪ್ರಕಟವಾದ ಗ್ರಂಥಗಳಲ್ಲಿ ಕೆಲವು ತೀರ ಅಶುದ್ಧವಾಗಿದ್ದವು. ಇನ್ನು ಕೆಲವು ಪೇಟೆಯಲ್ಲಿ ಲಭ್ಯವಿರಲಿಲ್ಲ. ಬೇರೆ ಕೆಲವು ಒಮ್ಮೆಯೂ ಪ್ರಕಟವಾಗಿರಲಿಲ್ಲ. ಈ ಎಲ್ಲ ಕೊರತೆಯನ್ನು ಗಮನಿಸಿ, ಈ ಗ್ರಂಥಮಾಲೆ ಪ್ರಾರಂಭವಾಯಿತು. ಮೃತ್ಯುಂಜಯ ಮಹಾಸ್ವಾಮಿಗಳ ಪರಮಾಶೀರ್ವಾದದಿಂದ ಆ ಕಾಲದ ದಿಗ್ಗಜರೆನಿಸಿದ ವಿದ್ವಾಂಸರೆಲ್ಲ ಈ ಕಾರ್ಯದಲ್ಲಿ ಸಹಕರಿಸಿದರು. ಪ್ರಾರಂಭದಲ್ಲಿ ಶ್ರೀ ಬಸವನಾಳರು ಕೈವಲ್ಯಗ್ರಂಥಗಳನ್ನು ಸಂಸ್ಕರಿಸಿ, ಪ್ರಕಟಿಸಿ ಈ ಮಾಲೆಗೆ ಶ್ರೀಕಾರ ಹಾಕಿದರು. ಆಮೇಲೆ ಡಾ. ನಂದೀಮಠ, ಉತ್ತಂಗಿ ಚನ್ನಪ್ಪ, ಸ.ಸ. ಮಾಳವಾಡ, ಸಂ. ಶಿ. ಭೂಸನೂರಮಠ, ಆರ್. ಸಿ. ಹಿರೇಮಠ, ಎಂ. ಎಸ್. ಸುಂಕಾಪುರ ಮೊದಲಾದವರು ಈ ದಿಸೆಯಲ್ಲಿ ಮಾಡಿದ ಕೆಲಸ

ಉಲ್ಲೇಖನಾರ್ಹವಾಗಿವೆ. ಇವರು ಒಂದೊಂದು ಪುಸ್ತಕ ಪ್ರಕಟಿಸಿದಾಗಲೆಲ್ಲ ಶ್ರೀಗಳವರಿಗೆ ಆಗುತ್ತಿದ್ದ ಆನಂದ ಅಪೂರ್ವ. ಪುಸ್ತಕ ಪ್ರಕಟನೆಯೆಂದರೆ ಮೃತ್ಯುಂಜಯಮಹಾಸ್ವಾಮಿಗಳಿಗೆ ಪುತ್ರೋತ್ಸವದಷ್ಟು ಸಂತೋಷ.

ಕರ್ನಾಟಕ ವಿಶ್ವವಿದ್ಯಾಲಯ ಇನ್ನೂ ಹುಟ್ಟದಿರುವಾಗ ಮಿಕ್ಕ ವಿಶ್ವವಿದ್ಯಾಲಯಗಳ ದೃಷ್ಟಿ ಇತ್ತ ಹರಿಯದಿರುವಾಗ ಶ್ರೀಗಳವರು ಮುರುಘಾಮಠದ ಶ್ರೀ ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆಯ ಮುಖಾಂತರ ಈ ಮಹತ್ಕಾರ್ಯವನ್ನು ಕೈಕೊಂಡರು. ಒಂದು ವಿಶ್ವವಿದ್ಯಾಲಯಕ್ಕಿಂತಲೂ ಹೆಚ್ಚಿನ ಕೆಲಸವನ್ನು ಪೂರೈಸಿರುವರು. ಲಕ್ಷಾಂತರ ರೂಪಾಯಿ ವೆಚ್ಚಮಾಡಿ ಅತಿ ಸುಂದರವಾಗಿ ಮುದ್ರಿಸಿ ಅನೇಕಾನೇಕ ಗ್ರಂಥಗಳನ್ನು ಪ್ರಕಟಪಡಿಸಿರುವರು. ಈ ಗ್ರಂಥಗಳ ಅವಲೋಕನದಿಂದ ಈ ಕಾರ್ಯದ ವ್ಯಾಪ್ತಿ, ಆಳ, ಔನ್ನತ್ಯಗಳ ಅರಿವಾಗುತ್ತದೆ.

### ೧) ವಚನಸಾಹಿತ್ಯ

ವೀರಶೈವ ತತ್ವದ ಪ್ರಮಾಣಗ್ರಂಥಗಳೂ ಸಾಹಿತ್ಯದ ಅಪೂರ್ವಕೃತಿಗಳೂ ಆಗಿರುವ ವಚನ ಸಂಕಲನಗಳು ನಮ್ಮ ಸಮಾಜದ ಗೌರವವನ್ನು ಎತ್ತಿ ಹಿಡಿದಿವೆ. ಇವುಗಳ ಪ್ರಕಟನೆಗೆ ಆದ್ಯತೆ ನೀಡುವ ಉದ್ದೇಶದಿಂದ ಶ್ರೀಮಠ ಉತ್ತಮೋತ್ತಮ ವಚನಕೃತಿಗಳನ್ನು ಪ್ರಕಟಿಸಿತು. ಇದರಿಂದಾಗಿ ಆದಯ್ಯನ ವಚನಗಳು, ಅಖಂಡೇಶ್ವರ ವಚನ, ತೋಂಟದಾರ್ಯರ ಷಟ್‌ಸ್ಥಲಜ್ಞಾನ ಸಾರಾಮೃತ ಎಂಬಂಥ ಏಕವ್ಯಕ್ತಿ ಕೃತಿಗಳಲ್ಲದೆ, ಲಿಂಗಲೀಲಾವಿಲಾಸ ಚಾರಿತ್ರ, ಗಣಭಾಷಿತ ರತ್ನಮಾಲೆಗಳಂಥ ಸಂಕಲನ ಗ್ರಂಥಗಳೂ ಬೆಳಕಿಗೆ ಬಂದವು.

ಅನೇಕ ಆಕರಗಳಲ್ಲಿ ಚದುರಿ ಹೋಗಿರುವ ಆದಯ್ಯನ ವಚನಗಳ ಸಂಗ್ರಹವನ್ನು ತುಂಬ ಶ್ರಮವಹಿಸಿ ಪರಿಷ್ಕರಿಸಲಾಗಿದೆ. ಬಿಡಿವಚನಗಳಿಗೆ ಇಡಿ ಶಿಲ್ಪಕೊಟ್ಟುದು ಇಲ್ಲಿಯ ವಿಶೇಷ. ಅಖಂಡೇಶ್ವರ ವಚನ, ಷಟ್‌ಸ್ಥಲಜ್ಞಾನಸಾರಾಮೃತಗಳು ವೀರಶೈವವನ್ನು ಕ್ರಮವತ್ತಾಗಿ ತಿಳಿದುಕೊಳ್ಳಲು ನೆರವಾಗುವ ಉತ್ತಮ ಕೃತಿಗಳು. ವೀರಶೈವರಿಗೆ ಮೊದಲಿನಿಂದಲೂ ಇರುವ ತಾತ್ವಿಕಗ್ರಂಥದ ಕೊರತೆಯನ್ನು ಬಹುಮಟ್ಟಿಗೆ ತುಂಬಿಕೊಡುವ ಈ ಕೃತಿಗಳು ಮಹತ್ವಪೂರ್ಣವೆನಿಸಿವೆ.

ಅನೇಕ ಜನ ಶರಣರ ವಚನಗಳಿಂದ ರೂಪಿಸಿದ ಸಂಕಲನ ಸಾಹಿತ್ಯ

ಸಂಪತ್ತು ವೀರಶೈವದಲ್ಲಿ ವಿಪುಲವಾಗಿದೆ. ಇವರ ಪ್ರಕಟನೆ ಅನೇಕ ದೃಷ್ಟಿಯಿಂದ ಉಪಯುಕ್ತವಾದುದು. ಹೀಗಾಗಿ ಲಿಂಗಲೀಲಾ ವಿಲಾಸಚಾರಿತ್ರ, ಗಣಭಾಷಿತ ರತ್ನಮಾಲೆಗಳ ಪ್ರಕಟನೆಗೆ ಇಲ್ಲಿ ಅವಕಾಶ ಮಾಡಿಕೊಡಲಾಗಿದೆ. ವಚನಗಳನ್ನು ವಿಶಿಷ್ಟ ಕ್ರಮದಲ್ಲಿ ಸರಗೊಳಿಸಿದುದಲ್ಲದೆ ವ್ಯಾಖ್ಯಾನ ಬರೆದು ವೇದಾಗಮ ಪ್ರಮಾಣಗಳಿಂದ ಸಮರ್ಥಿಸಿದ ಕೃತಿಗಳಿವು. ಈ ಎಲ್ಲ ಕೃತಿಗಳ ಕರ್ತೃಗಳು ಆದಯ್ಯ, ನಿರಾಲಂಬ ಶರಣ, ತೋಂಟದ ಸಿದ್ಧಲಿಂಗಶಿವಯೋಗಿ, ಕಲ್ಲುಮಠದ ಪ್ರಭುದೇವ, ಗುಬ್ಬಿಯ ಮಲ್ಲಣ್ಣರೆಂಬ ವೀರಶೈವ ತತ್ವದ ಸಾಕಾರವ್ಯಕ್ತಿಗಳು ; ಸಂಪಾದಿಸಿದವರು ಹೊಸಮಠದ ಸಿದ್ಧವೀರದೇವರು, ಎಸ್. ಎಸ್. ಭೂಸನೂರಮಠ, ಉತ್ತಂಗಿ ಚೆನ್ನಪ್ಪ, ಆರ್. ಸಿ. ಹಿರೇಮಠರಂಥ ಘನವಿದ್ವಾಂಸರು. ಪ್ರೌಢಪ್ರಸ್ತಾವನೆ, ಉಪಯುಕ್ತ ಅನುಬಂಧಗಳ ಈ ಪ್ರಕಟನೆಗಳಿಂದಾಗಿ ಹಳಕಟ್ಟಿಯವರ ತರುವಾಯ ಮಂದವಾಗಿದ್ದ ವಚನವಾಹಿನಿಯ ಪ್ರಕಟನೆಗೆ ಹೊಸ ಚಾಲನೆ ದೊರೆಯಿತು. ವೀರಶೈವ ವಿದ್ವಾಂಸರು ಈ ಕಡೆಗೆ ಮತ್ತೆ ಗಮನಕೊಡುವ ಹೊಸ ವಾತಾವರಣ ನಿರ್ಮಾಣವಾಯಿತು. ಜೊತೆಗೆ ವೀರಶೈವ ಅಭ್ಯಾಸಿಗಳ ವಚನ ವಾಚನದ ಆಸಕ್ತಿ ಚಿಗುರಿ, ಅವುಗಳ ಅಧ್ಯಯನ ಅಧ್ಯಾಪನಗಳು ಉತ್ತಮಗೊಳ್ಳಲು ಸಾಧ್ಯವಾಯಿತು. ಜನತೆ, ವಿದ್ವಜ್ಜನತೆಯ ಒಲವು ವಚನಸಾಹಿತ್ಯದತ್ತ ಹೊರಳಲು ಈ ಕೃತಿಗಳು ನೆರವಾದವು. ವೀರಶೈವ ಮಠಗಳು ಕೇವಲ ಧಾರ್ಮಿಕ ವಿಧಿ-ವಿಧಾನದ ಗ್ರಂಥಗಳ ಪ್ರಕಟನೆಗಿಂತ ಇಂಥ ಮೌಲಿಕ ಗ್ರಂಥಗಳ ಪ್ರಕಟನೆಯನ್ನು ಕೈಗೆತ್ತಿಕೊಳ್ಳಬೇಕೆಂಬ ಮಾರ್ಗದರ್ಶನವೂ ಈ ಪ್ರಕಟನೆಗಳಿಂದ ಉಂಟಾಯಿತು.

**೨) ಗೀತಸಾಹಿತ್ಯ**

ಇಂದಿಗೂ ತೀರ ಉಪೇಕ್ಷೆಗೆ ಒಳಗಾಗಿದೆ, ವೀರಶೈವ ಗೀತಸಾಹಿತ್ಯ. ತತ್ವ ಪ್ರಚಾರಕ್ಕೆ ಗೀತೆ ಸಮರ್ಪಕ ಮಾಧ್ಯಮವೆಂಬ ದೃಷ್ಟಿಯಿಂದ ನಮ್ಮ ಪ್ರಾಚೀನರು ಗೀತಸಾಹಿತ್ಯವನ್ನು ವಿಪುಲಪ್ರಮಾಣದಲ್ಲಿ ಸೃಷ್ಟಿಸಿದರು. ಆದರೆ ಆಧುನಿಕ ಕಾಲದಲ್ಲಿ ಇದು ಸರಿಯಾದ ಪ್ರಮಾಣದಲ್ಲಿ, ಸರಿಯಾದ ರೀತಿಯಲ್ಲಿ ಪ್ರಕಟವಾಗಲಿಲ್ಲ ; ವಿದ್ವಾಂಸರ ಅಧ್ಯಯನಕ್ಕೂ ಒಳಪಡಲಿಲ್ಲ. ಇದನ್ನು ಗಮನಿಸಿ ವೀರಶೈವ ವಿದ್ವಾಂಸರು ಶ್ರೀ ಮುರುಘಾಮಠದ

ಗ್ರಂಥಮಾಲೆಯು ಮೂಲಕ ವೀರಶೈವ ಗೀತಸಾಹಿತ್ಯವನ್ನೂ ಪ್ರಕಟಿಸಿದರು. ಇದರ ಫಲವಾಗಿ ಕೈವಲ್ಯದರ್ಪಣ, ಭಕ್ತಿಸುಧಾಸಾರ, ಸುಬೋಧಸಾರ, ಕೈವಲ್ಯ ಕಲ್ಪವಲ್ಲರಿ ಕೃತಿಗಳು ಬೆಳಕಿಗೆ ಬಂದು ಕೀರ್ತನ–ಪುರಾಣ ಪ್ರಸಂಗಗಳಲ್ಲಿ, ಸಭೆ–ಸಮಾರಂಭಗಳಲ್ಲಿ ಹಾಡಲು, ಧರ್ಮಪ್ರಸಾರ ಮಾಡಲು ಉಪಯುಕ್ತ ಸಾಹಿತ್ಯ ಲಭ್ಯವಾಯಿತು. ಬಾಲಲೀಲಾ ಮಹಾಂತಶಿವಯೋಗಿ, ಘನಮಠದಾರ್ಯ, ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ—ಈ ಕವಿಗಳ ಈ ಗೀತಸಾಹಿತ್ಯವನ್ನು ಪರಿಷ್ಕರಿಸಿಕೊಟ್ಟವರು ಶಿ. ಶಿ. ಬಸವನಾಳ, ಎಸ್. ಎಸ್. ಭೂಸನೂರಮಠ ಹರ್ಡೇಕರ ಮಂಜಪ್ಪ ಮತ್ತು ವೈ. ನಾಗೇಶಶಾಸ್ತ್ರಿ ಈ ವೀರಶೈವ ವಿದ್ವಾಂಸರು.

**೩) ಕಾವ್ಯಸಾಹಿತ್ಯ**

ಈ ಮಾಲಿಕೆಯಲ್ಲಿ ವೀರಶೈವ ಸಾಹಿತ್ಯದ ಕೆಲವು ಪ್ರೌಢಗ್ರಂಥಗಳು ಪ್ರಕಟವಾಗಿವೆ. ಅವು ಚರಿತ್ರೆ, ಸಾಹಿತ್ಯಗುಣ ದೃಷ್ಟಿಯಿಂದ ಬಹಳ ಮಹತ್ವವಾದವು. ರಾಘವಾಂಕ ಚಾರಿತ್ರ, ಗುರುರಾಜಚಾರಿತ್ರ, ಪದ್ಮರಾಜಪುರಾಣ, ಪ್ರೌಢದೇವರಾಯನ ಕಾವ್ಯ—ಈ ನಾಲ್ಕೂ ಒಂದು ವರ್ಗಕೆ ಸೇರಿದುವು. ಹಿಂದಿನ ಪುರಾಣ ಪುಣ್ಯಕಥೆಗಳ ವ್ಯಕ್ತಿಗಳನ್ನಾಯ್ದು ಕಾವ್ಯ ಬರೆಯುವ ಸಂಪ್ರದಾಯಕ್ಕೆ ಬದಲು, ಈ ನೆಲದಲ್ಲಿ ಹುಟ್ಟಿ ತಮ್ಮ ಕೃತಿಗಳ ಮೂಲಕ ಪ್ರಸಿದ್ಧರಾದ ಶರಣ ಕವಿಗಳನ್ನು ಕುರಿತು ವೀರಶೈವ ಕವಿಗಳು ಕಾವ್ಯ ಬರೆದುದು ಕನ್ನಡ ಸಾಹಿತ್ಯದಲ್ಲಿ ಒಂದು ವಿನೂತನ ಉಪಕ್ರಮ. ಬಸವಣ್ಣನವರನ್ನು ಕುರಿತು ಹರಿಹರ, ಹರಿಹರನನ್ನು ಕುರಿತು ರಾಘವಾಂಕ, ರಾಘವಾಂಕನನ್ನು ಕುರಿತು ಸಿದ್ಧನಂಜೇಶರು ಕೃತಿರಚನೆ ಮಾಡಿದುದು ಒಂದು ವಿಶೇಷ. ಇದೇ ಮಾಲಿಕೆಯಲ್ಲಿ ಗುರುರಾಜ ಚಾರಿತ್ರ, ಪ್ರೌಢರಾಯನ ಕಾವ್ಯ, ಪದ್ಮರಾಜಪುರಾಣ ಈ ಕಾವ್ಯಗಳು ಹುಟ್ಟಿಬಂದಿವೆ. ಇವು ಕಾವ್ಯಕ್ಕೆ ಕಾವ್ಯ, ಚರಿತ್ರೆಗೆ ಚರಿತ್ರೆ. ಇವುಗಳ ಪ್ರಕಟನೆ, ವೀರಶೈವದ ಕಳೆದು ಹೋದ ಇತಿಹಾಸ ರಚನೆಗೆ ತೀರ ಉಪಯುಕ್ತವೆಂಬ ದೃಷ್ಟಿಯಿಂದ ಪ್ರೊ. ಭೂಸನೂರಮಠ, ಪ್ರೊ. ಸ. ಸ. ಮಾಳವಾಡ, ಡಾ. ಆರ್. ಸಿ. ಹಿರೇಮಠ ಮೊದಲಾದ ವಿದ್ವಾಂಸರು ಇವುಗಳನ್ನು ಸಂಪಾದಿಸಿಕೊಟ್ಟರು. ಇವುಗಳಿಗೆ ಬರೆದ ಉಪೋದ್ಘಾತ,

ಗದ್ಯಾನುವಾದಗಳು ಪಿಎಚ್.ಡಿ ಪ್ರಬಂಧದ ವ್ಯಾಪ್ತಿಪಡೆದುದು ಒಂದು ವಿಶೇಷ.

ಈ ಮಾಲಿಕೆಯಲ್ಲಿ ಪ್ರಕಟಿತಗೊಂಡ ಅನೇಕ ಕೃತಿಗಳಲ್ಲಿ ಪ್ರತ್ಯೇಕ ಹೆಸರಿಸಬೇಕಾದುದು ಬಸವಪುರಾಣ. ಅದು ವೀರಶೈವರಿಗೆ ಪರಮ ಪವಿತ್ರಗ್ರಂಥ. ಬಸವಣ್ಣನವರ ವಚನ, ಬಸವಪುರಾಣಗಳೆರಡೂ ಮೃತ್ಯುಂಜಯ ಮಹಾಸ್ವಾಮಿಗಳಿಗೆ ಎರಡು ಕಣ್ಣುಗಳಂತಿದ್ದವು. ಅವನ್ನು ಪ್ರಕಟಿಸುವ ಆಶೆ ಅವರಿಗೆ ಬಹಳವಾಗಿದ್ದಿತು. ಭೀಮಕವಿಯ ಬಸವಪುರಾಣವನ್ನು ಮೃತ್ಯುಂಜಯ ಮಹಾಸ್ವಾಮಿಗಳು ಆ ಕಾಲದಲ್ಲಿ ಐವತ್ತು ಸಹಸ್ರಕ್ಕೂ ಹೆಚ್ಚಿನ ಹಣ ವೆಚ್ಚಮಾಡಿ, ಸುಂದರವಾಗಿ ಅಚ್ಚು ಮಾಡಿಸಿರುವರು.

## ೪) ಶಾಸ್ತ್ರಕೃತಿಗಳು

ಶ್ರೀ ಮುರುಘಾಮಠ ಪ್ರಕಟಿಸಿದ ಅನೇಕ ಶಾಸ್ತ್ರಕೃತಿಗಳಲ್ಲಿ ಮಗ್ಗೆಯ ಮಾಯಿದೇವರ ಶತಕತ್ರಯ ಮತ್ತು ವಿಶೇಷಾರ್ಥ ಪ್ರಕಾಶಿಕೆ ಮುಖ್ಯವಾದುವು. ಮಗ್ಗೆಯ ಮಾಯಿದೇವರು ವೀರಶೈವ ಸಾಹಿತ್ಯ ಕ್ಷೇತ್ರದಲ್ಲಿ ಮೇರುಸದೃಶರಾದವರು. ಅವರು ಕನ್ನಡ, ಸಂಸ್ಕೃತ ಎರಡರಲ್ಲಿಯೂ ಉದ್ದಾಮಪಂಡಿತರು. ಸಿದ್ಧಾಂತವಿಷಯಗಳನ್ನು ಸರಸಶೈಲಿಯಲ್ಲಿ ರಚಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಕೃತಿಗಳಲ್ಲಿ ಶತಕತ್ರಯ ಮತ್ತು ವಿಶೇಷಾರ್ಥ ಪ್ರಕಾಶಿಕೆ ರತ್ನಪ್ರಾಯವಾದವು. ಇವುಗಳನ್ನು ವ್ಯಾಖ್ಯಾನದೊಂದಿಗೆ ಶ್ರೀ ವಾಯ್. ನಾಗೇಶಶಾಸ್ತ್ರಿಗಳು ಬೆಳಕಿಗೆ ತಂದಿದ್ದಾರೆ. ಶಾಸ್ತ್ರಶುದ್ಧ ಪರಿಷ್ಕರಣ, ಸರಳ–ಸ್ಪಷ್ಟ ವ್ಯಾಖ್ಯಾನಗಳಿಂದಾಗಿ ಈ ಪ್ರಕಟನೆಗಳಿಗೆ ಬಂಗಾರದ ಬೆಲೆ ಸಲ್ಲುತ್ತದೆ.

## ೫) ಆಧುನಿಕ ಕೃತಿಗಳು

ಪ್ರಾಚೀನ ಸಾಹಿತ್ಯದ ಪ್ರಕಟನೆಯಷ್ಟೇ ಮುಖ್ಯವಾದುದು ಇದನ್ನು ಆಧರಿಸಿ ಬರೆದ ಆಧುನಿಕ ಸಾಹಿತ್ಯವನ್ನು ಪ್ರಕಟಿಸುವುದು. ಇದು ಜನಸಾಮಾನ್ಯನಿಗೆ ಸಾಹಿತ್ಯ–ತತ್ವಗಳನ್ನು ಮುಟ್ಟಿಸುವ ಕೆಲಸ. ಈ ದೃಷ್ಟಿಯಿಂದ ಶ್ರೀ ಮೃತ್ಯುಂಜಯಸ್ವಾಮಿಗಳು ಅನೇಕ ಆಧುನಿಕ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸಿದರು. ಅವುಗಳಲ್ಲಿ ಶ್ರೀ ನಾಗೇಶಶಾಸ್ತ್ರಿಗಳ

ಅಷ್ಟಾವರಣ ವಿವೇಕ, ಪಂಚಾಚಾರ ಪ್ರಕಾಶಿಕೆ, ಷಟ್‌ಸ್ಥಲತತ್ತ್ವದರ್ಪಣಗಳು ಮುಖ್ಯವಾದುವು. ವೀರಶೈವ ಅಭ್ಯಾಸಿಗಳಿಗೆ ಕೈಗನ್ನಡಿಯಂತೆ ಇವು ತೀರ ಉಪಯುಕ್ತವೆನಿಸಿವೆ.

ಒಂದು ವಿಶ್ವವಿದ್ಯಾಲಯ ಮಾಡುವಷ್ಟು ಕೆಲಸವನ್ನು ಮೃತ್ಯುಂಜಯ ಸ್ವಾಮಿಗಳು 'ಶ್ರೀ ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆ'ಯ ಮುಖಾಂತರ ಮಾಡಿರುವರೆಂಬ ಮಾತು ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ. ವಿಶ್ವವಿದ್ಯಾಲಯಗಳಿಲ್ಲದ ಅಂದಿನ ಕಾಲದಲ್ಲಿ ಘನತೆವೆತ್ತ ಈ ಸಾಹಿತ್ಯಪ್ರಕಟನೆಯ ಕಾರ್ಯ ಪ್ರಾರಂಭವಾಗಿ, ಕ್ಷಿಪ್ರದಲ್ಲಿಯೇ ಗ್ರಂಥಸಂಖ್ಯೆ ನೂರರ ಹಂತವನ್ನು ಮುಟ್ಟಿತು.

ಸಾಹಿತ್ಯಪ್ರಕಟನೆಯ ಜೊತೆಗೆ 'ಸಾವಧಾನ' ಪತ್ರಿಕೆಯ ವಿಷಯವನ್ನೂ ಇಲ್ಲಿ ಉಲ್ಲೇಖಿಸಬೇಕು. ಮುರುಘಾಮಠದ ಅಪೂರ್ವ ಸೊತ್ತೆಂದರೆ ಪಂ. ನಾಗಭೂಷಣಶಾಸ್ತ್ರಿಗಳು. ನಿಖರವಾದ ಸಂಸ್ಕೃತ ಪಾಂಡಿತ್ಯಕ್ಕೆ ಇವರು ಪ್ರಮಾಣಪುರುಷರು. ನಾಗಭೂಷಣಶಾಸ್ತ್ರಿಗಳಲ್ಲಿ ಪಾಂಡಿತ್ಯವಿದೆ, ವಿಮರ್ಶನ ಶಕ್ತಿಯಿದೆ, ಹೊಸ ದೃಷ್ಟಿಯಿದೆ. ಮುರುಘಾಮಠಕ್ಕೆ ಆಸ್ಥಾನಪಂಡಿತರಂತಿದ್ದುಕೊಂಡು ಅಪ್ಪಗಳ ಆದೇಶದಂತೆ ಅವರು ಮಠದ ಮುಖಪತ್ರಿಕೆಯಾದ 'ಸಾವಧಾನ' ಪಾಕ್ಷಿಕವನ್ನು ಸಂಪಾದಿಸುತ್ತ ಬಂದರು. ಮೃತ್ಯುಂಜಯಸ್ವಾಮಿಗಳಿಗೆ ಹೊಸ ಹೊಸ ಸಲಹೆಗಳನ್ನೀಯುತ್ತಿದ್ದವರಲ್ಲಿ ನಾಗಭೂಷಣಶಾಸ್ತ್ರಿಗಳು ಅಗ್ರಗಣ್ಯರು. ಅವರಿಗೆ ಸಮಾಜದ ಬಗ್ಗೆ ಅಷ್ಟು ಕಳಕಳಿ. ಮಠಕ್ಕೊಂದು ಮುಖಪತ್ರಿಕೆ ಬೇಕೆನ್ನುವ ವಿಚಾರವನ್ನು ಶಾಸ್ತ್ರಿಗಳೇ ಹೇಳಿದರು. ಅದರ ಹೆಸರನ್ನೂ ಅವರೇ ಸೂಚಿಸಿದರು. ಶ್ರದ್ಧೆ ನಿಷ್ಠೆ ಅವಧಾನ ಮೊದಲಾದವು ವೀರಶೈವದ ಷಡ್ವಿಧಭಕ್ತಿಗಳು. ಅವಧಾನದಲ್ಲಿ ಎಚ್ಚರಿಕೆ ಇದೆ. ಸಾವಧಾನ ಎಚ್ಚರಿಕೆಯಿಂದ ಬರೆಯುವ ಪತ್ರಿಕೆ. ಇಂಥ ಅನ್ವರ್ಥಕವಾದ ಹೆಸರನ್ನು ಹೊತ್ತ ಪತ್ರಿಕೆ ಕಳೆದ ೪೦ ವರ್ಷಗಳಿಂದಲೂ ನಡೆದುಬಂದಿದೆ.

## ಶಿವಾನುಭವ ಸಂಸ್ಥೆ

ಮೃತ್ಯುಂಜಯ ಮಹಾಸ್ವಾಮಿಗಳು ವೀರಶೈವದ ಯುಗಪ್ರವರ್ತಕರೆಂಬ ಮಾತು ನೂರಕ್ಕೆ ನೂರು ನಿಜ. ವೀರಶೈವ

ಜನಾಂಗದ ಮೇಲೆ ಆವರಿಸಿದ್ದ ಕತ್ತಲೆಯ ಕಾಂಡಪುಟವನ್ನು ಸರಿಸಬೇಕೆಂಬುದೇ ಮೃತ್ಯುಂಜಯಸ್ವಾಮಿಗಳ ಮರ್ತ್ಯದ ಮಣಿಹ. ಎದ್ದರೆ, ಕುಳಿತರೆ 'ಈ ಧರ್ಮ ಪ್ರಸಾರವಾಗಬೇಕು, ಬಸವಣ್ಣನ ಬೆಳಗು ಸುತ್ತೆಲ್ಲ ಪಸರಿಸಬೇಕು' ಎಂಬ ಕಳಕಳಿ ಮೃತ್ಯುಂಜಯಸ್ವಾಮಿಗಳಿಗಿದ್ದಿತು. 'ಇನ್ನೇನು ಮಾಡದಿದ್ದರೂ ಇಷ್ಟಲಿಂಗಧಾರಣ ಮಾಡಿರಿ, ಹಣೆಗೆ ಭಸ್ಮ ಹಚ್ಚಿರಿ, ಓಂ ನಮಃಶಿವಾಯ ಎಂದು ಲಿಂಗಕ್ಕೆ ನಮಸ್ಕರಿಸಿ' ಎಂಬುದು ಮೃತ್ಯುಂಜಯ ಸ್ವಾಮಿಗಳ ಉಸಿರಾಗಿದ್ದಿತು. ಮೃತ್ಯುಂಜಯಸ್ವಾಮಿಗಳು ಮುಗ್ಧಭಕ್ತರಾಗಿದ್ದಂತೆ ದೂರದೃಷ್ಟಿಯುಳ್ಳವರೂ ಆಗಿದ್ದರು. ಇಪ್ಪತ್ತನೆಯ ಶತಮಾನದ ವೈಜ್ಞಾನಿಕ ಯುಗದಲ್ಲಿ ವೀರಶೈವಧರ್ಮ ಹೀಗೆ ಬದುಕಬಲ್ಲುದೆಂಬುದನ್ನು ಅವರು ತಿಳಿದುಕೊಂಡಿದ್ದರು. ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರಗಳ ಭಾರವನ್ನು ಹಾಕಿ, ತ್ರಿಕಾಲಪೂಜೆಯ ಕಟ್ಟನ್ನು ಕೊಟ್ಟು, ವೀರಶೈವಧರ್ಮ ಪ್ರತಿಪಾದನ ಮಾಡಿರಿ ಎಂದರೆ ಅದು ಸಾಮಾನ್ಯನಿಗೆ ಸಾಧ್ಯವಾಗದು. ಇಂದಿನ ಸಂಕೀರ್ಣಯುಗದಲ್ಲಿ ಯಾರಿಗೂ ಯಾವುದಕ್ಕೂ ಸಮಯವಿಲ್ಲ. ಇಂಥವರಿಗೆ ಅನುಸರಿಸಲು ಯೋಗ್ಯವಾದ ಧರ್ಮವೊಂದು ಬೇಕೆಂಬುದು ಅವರ ವಾಣಿಯಲ್ಲಿ ವ್ಯಕ್ತವಾಗುತ್ತಿತ್ತು. 'ವೀರಶೈವದ ಅರುಹಿನ ಕುರುಹಾದ ಲಿಂಗವು ಪ್ರತಿಯೊಬ್ಬರ ಲೀಗದ ಮೇಲೆ ಪ್ರತಿಷ್ಠಾಪಿತವಾಗಲಿ' ಎಂಬುದು ಶ್ರೀಗಳವರ ಮುಖ್ಯ ಮೂಲಭೂತ ಬೋಧನೆಯಾಗಿದ್ದಿತು. ಶರಣರ ಚರಿತ್ರೆಗಳನ್ನು ಕೇಳಿ ತಮ್ಮ ನಡೆನುಡಿಗಳನ್ನು ಜನ ತಿದ್ದಿಕೊಳ್ಳಲೆಂದು ಅವರು ಹೋದಲ್ಲಿ ಬಂದಲ್ಲಿ ನಡೆದಲ್ಲಿ ನುಡಿದಲ್ಲಿ ಪುರಾತನರ ನೂತನರ ದೃಷ್ಟಾಂತಗಳನ್ನು ಕೊಡುತ್ತಲೇ ಇದ್ದರು. ಇವೆಲ್ಲವುಗಳನ್ನು ಒಳಗೊಂಡ ವೀರಶೈವದ ಬೋಧನ ವ್ಯಾಪಕವಾಗಿ ನಡೆಯುವ ಸಲುವಾಗಿ 'ವೀರಶೈವ ವಿದ್ಯಾಪೀಠವೊಂದು ಸ್ಥಾಪಿತವಾಗಬೇಕೆಂಬುದು ಅವರ ಕನಸಾಗಿದ್ದಿತು. ಅದಕ್ಕೆ ಪೂರ್ವಭಾವಿಯಾಗಿ ವೀರಶೈವವನ್ನು ಬೋಧಿಸುವುದಕ್ಕೆ 'ಶಿವಾನುಭವ ಸಂಸ್ಥೆ'ಯೊಂದನ್ನು ಸ್ಥಾಪಿಸಿದರು. ಶಿವಾನುಭವವೆಂಬ ಶಬ್ದವನ್ನು ಪರಿಚಯಿಸಿದವರು ಡಾ. ಫ. ಗು. ಹಳಕಟ್ಟಿಯವರು. ಪ್ರಚುರಗೊಳಿಸಿದವರು ಮೃತ್ಯುಂಜಯ ಸ್ವಾಮಿಗಳು. ನಿಂತಲ್ಲಿ ಕುಳಿತಲ್ಲಿ ನಡೆ–ನುಡಿಗೆ ಸಂಬಂಧಿಸಿದ ನಾಲ್ಕು ಒಳ್ಳೆಯ ಮಾತನ್ನು ಹೇಳಿದರೆ, ಹೇಳಿಸಿದರೆ ಶಿವಾನುಭವವಾಗುತ್ತದೆ ಎಂಬುದು ಅವರ ಶಿವಾನುಭವದ ಕಲ್ಪನೆಯಾಗಿದ್ದಿತು. ಅಂದರೆ ಎಲ್ಲಿ

ಲೇಸುಂಟೋ ಅಲ್ಲಿ ಮೃತ್ಯುಂಜಯಸ್ವಾಮಿಗಳ ಶಿವಾನುಭವವಿದ್ದಂತೆ. 'ಶಿವಾನುಭವ'ವೆಂಬುದು ಇತ್ತೀಚೆ ವೀರಶೈವ ಜನಾಂಗದಲ್ಲಿ, ಮಠಗಳಲ್ಲಿ ಜನಪ್ರಿಯವಾದ ಕಾರ್ಯಕ್ರಮವಾಗಿ ಮೈಗೊಂಡುದು ಶಿವಾನುಭವಸಂಸ್ಥೆಯಾದಂದಿನಿಂದ. ಮೃತ್ಯುಂಜಯಸ್ವಾಮಿಗಳು ಸಾವಿರಾರು ಕಡೆಗೆ ಶಿವಾನುಭವಕಾರ್ಯಕ್ರಮ, ಸಮ್ಮೇಲನ, ಅಧಿವೇಶನಗಳನ್ನು ನಡೆಸಿದ ಮೇಲೆ ಅದಕ್ಕೆ ಹೆಚ್ಚಿನ ವ್ಯಾಪ್ತಿದೊರೆಯಿತು. ತಿಳಿದವರು ತಿಳಿಯದವರಿಗೆ ಬೋಧೆ ಮಾಡಬೇಕು. ತಿಳಿದವರಲ್ಲಿ ಎರಡುವರ್ಗ. ಒಂದು ವರ್ಗ ಓದಿ ತಿಳಿದುಕೊಂಡವರು. ಇನ್ನೊಂದು ವರ್ಗ ಆಚರಣೆಯನ್ನು ಮಾಡಿ ಅರಿತವರು. ಈ ಎರಡೂ ಗುಂಪಿನ ಜನರನ್ನು ಮೃತ್ಯುಂಜಯಸ್ವಾಮಿಗಳು ಗುರುತಿಸಿದರು. ಓದಿ ತಿಳಿದುಕೊಂಡವರಿಗೆ ಆಚರಣೆಯ ವಿಷಯಗಳನ್ನು ತಿಳಿಸಿ, ಅವರನ್ನೂ ಇವರನ್ನೂ ಬೋಧಕರು ಮತ್ತು ಪ್ರಾತ್ಯಕ್ಷಿಕೆಯನ್ನು ತೋರಿಸುವವರು ಎಂದು ನಿರ್ಣಯಿಸಲಾಯಿತು. ಮೊದಲು ಶಿವಾನುಭವ ತರಬೇತಿ ವರ್ಗಗಳನ್ನೇ ಪ್ರಾರಂಭಿಸಿದರು. ಪ್ರಾರಂಭದಲ್ಲಿ ಯಾವ ಹಂತವನ್ನು ಕಲಿಸಬೇಕು, ಮುಂದೆ ತರಗತಿಗಳು ಹೇಗೆ ಮೇಲಕ್ಕೆ ಹೋಗಬೇಕು, ಇದೆಲ್ಲವನ್ನೂ ಪಂಡಿತರ ಮುಖಾಂತರ ನಿಷ್ಕರ್ಷಿಸಿದರು. ಅಂದರೆ ಒಂದು ರೀತಿಯಲ್ಲಿ ಕ್ರಮಪ್ರಾಪ್ತವಾದ ಪಠ್ಯಕ್ರಮ (Graded Syllabus) ವನ್ನು ನಿರ್ಣಯಿಸಿದರು. ತರಬೇತಿ ವರ್ಗಗಳಲ್ಲಿ ಬಲ್ಲವರಿಂದ ಬೋಧನ ಕಾರ್ಯ ನಡೆಯುತ್ತಿತ್ತು. ಈ ಬಲ್ಲವರು ಲಿಂಗಾರ್ಚನೆ ಮಾಡಿಕೊಳ್ಳುವ ಕಾಲಕ್ಕೆ ವಿದ್ಯಾರ್ಥಿಗಳು ಅವರ ಹತ್ತಿರ ಕುಳಿತು, ಪೂಜಾವಿಧಾನ, ಪಾದೋದಕ ವಿಧಾನ ಮುಂತಾದ ಅಷ್ಟಾವರಣಗಳ ವಿಚಾರಗಳೆಲ್ಲವನ್ನೂ ಪ್ರತ್ಯಕ್ಷವಾಗಿ ನೋಡಿ ಮಾಡಿ ಕಲಿಯಬೇಕಾಗುತ್ತಿತ್ತು. ಹೀಗೆ ನಾಲ್ಕಾರು ವಾರಗಳ ತರಬೇತಿ ಶಿಬಿರಗಳನ್ನು ನಡೆಸುತ್ತಿದ್ದರು. ಈ ಪಠ್ಯಕ್ರಮಕ್ಕೆ ತಕ್ಕ ಪಠ್ಯಪುಸ್ತಕಗಳನ್ನೂ ರಚಿಸಲಾಯಿತು. ಶಿವಾನುಭವ ಬೋಧನವರ್ಗಗಳು ಬೇರೆ ಬೇರೆ ಕಡೆಗೆ ಆರಂಭವಾದವು.

ಮೃತ್ಯುಂಜಯ ಮಹಾಸ್ವಾಮಿಗಳು ಯಾವಾಗಲೂ ತಲಸ್ಪರ್ಶಿಯಾಗಿ ಕಾರ್ಯವನ್ನು ಪ್ರಾರಂಭಿಸುವರು. ಬಸವಾದಿ ಪ್ರಮಥರ ವಿಚಾರಗಳು, ಶರಣಧರ್ಮ ಇವು ಹಳ್ಳಿಯ ಜನರಿಗೆ ಹೋಗಿ ಮುಟ್ಟಬೇಕೆಂಬುದು ಅವರ ಇಚ್ಛೆ. ಈ ಶಿವಾನುಭವ ವರ್ಗಗಳನ್ನು ಆ ಮಾದರಿಯಲ್ಲಿ ಆರಂಭಿಸಿದ್ದರು. ಕನ್ನಡ ನಾಡಿನ ಬೇರೆ ಬೇರೆ ಪ್ರದೇಶಗಳಲ್ಲಿ ನಡೆಸಲಾಗುತ್ತಿದ್ದ ಶಿವಾನುಭವ

ವರ್ಗಗಳಲ್ಲಿ ಅಭ್ಯಾಸಮಾಡಿ, ಅನೇಕರು ಪರೀಕ್ಷೆಗೆ ಕುಳಿತುಕೊಳ್ಳುತ್ತಿದ್ದರು, ಪರೀಕ್ಷೆ ಜರುಗುತ್ತಿದ್ದಿತು, ಫಲಿತಾಂಶ ಪ್ರಕಟವಾಗುತ್ತಿದ್ದಿತು. ಹೊಸಬರು ಬಂದು ಸೇರುವುದು, ಇದ್ದವರು ಮುಂದಿನ ತರಗತಿಗೆ ಹೋಗುವುದು ನಡೆದು ಒಂದು ಶಿವಾನುಭವ ಶಿಕ್ಷಣ ಸಂಸ್ಥೆಯೇ ಮುರುಘಾಮಠದ ಆಶ್ರಯದಲ್ಲಿ ಹುಟ್ಟಿ ಬೆಳೆಯಿತು. ವಾಯ್. ನಾಗೇಶಶಾಸ್ತ್ರಿ, ವಾಯ್. ಮಹಾಬಳೇಶ್ವರಪ್ಪ, ಜೋಳದರಾಶಿ ದೊಡ್ಡನಗೌಡ, ಸುಪ್ರಸಿದ್ಧ ನ್ಯಾಯವಾದಿಗಳಾದ ಬಿ. ಎಸ್. ಪಾಟೀಲ, ಹುರಳಿ ಗದಿಗೆಪ್ಪ, ಟಿ. ಜಿ. ಉಗ್ರಾಣಕರ ಮುಂತಾದವರು ಶಿವಾನುಭವ ಸಂಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ಇದರ ಮೇಲೆ ಮೃತ್ಯುಂಜಯಸ್ವಾಮಿಗಳು ಶಿವಾನುಭವ ಚರಚಕ್ರವರ್ತಿಗಳು. ಇವರು ನೆಟ್ಟ ಈ ಸಸಿ ಈಗಲೂ ಬೆಳೆಯುತ್ತಲಿದೆ. ಅದು ಬೆಳೆಯುವಲ್ಲಿ, ಉಳಿಯುವಲ್ಲಿ, ಸರಿಯಾದ ಫಲ ನೀಡುವಲ್ಲಿ ಸಂದೇಹವಿಲ್ಲ.

ಮೃತ್ಯುಂಜಯಮಹಾಸ್ವಾಮಿಗಳ ಶಿವಾನುಭವ ಬೋಧೆಯು ಭಜನೆ, ಕೀರ್ತನ, ಪ್ರಭಾತ ಪೇರಿಗಳಿಂದ ಪ್ರಾರಂಭವಾಗಿ ಶಿವಾನುಭವವರ್ಗಕ್ಕೆ ಬಂದು ನಿಂತಿದೆ. ಮೃತ್ಯುಂಜಯಸ್ವಾಮಿಗಳ ಕನಸಿನ ವೀರಶೈವ ವಿದ್ಯಾಪೀಠ ಇನ್ನೂ ಉದಯವಾಗಬೇಕಾಗಿದೆ.

## ಪ್ರ ಸಾ ದ

'ಪ್ರಸಾದ' ಮೃತ್ಯುಂಜಯಸ್ವಾಮಿಗಳಿಗೆ ಅತ್ಯಂತ ಪ್ರಿಯವಾದ ಪರಿಭಾಷೆ. ಯಾವ ಸಮಯದಲ್ಲಿ ಯಾರು ಬಂದರೂ 'ಮೊದಲು ಪ್ರಸಾದ ತೆಗೆದುಕೊಳ್ಳಿರಿ' ಎಂಬುದು ಅವರ ವಾಣಿ. ಪ್ರಸಾದ ಯಾವಾಗಲೂ ಅಲ್ಲಿ ಸಿದ್ಧ. ಅಲ್ಲಿಗೆ ಬಂದವರು ಉಪವಾಸ ಹೋಗುವಂತಿಲ್ಲ. ಅದು ಮೃತ್ಯುಂಜಯಸ್ವಾಮಿಗಳು ಕೈಕೊಂಡು ಬಂದ ಒಂದು ವ್ರತವಾಗಿದ್ದಿತು. ಒಮ್ಮೆ ಮಧ್ಯಾಹ್ನ ಮೂರು–ನಾಲ್ಕು ಗಂಟೆಯ ಹೊತ್ತಿಗೆ ಎರಡು ಬಸ್ಸಿನ ಜನ ದರ್ಶನಕ್ಕೆಂದು ಬಂದರು. ದರ್ಶನವಾಯಿತು. ಥಟ್ಟನೆ 'ಪ್ರಸಾದವಾಗಲಿ' ಎಂದರು. ಆಗ ಮಠದಲ್ಲಿ ಅಡುಗೆಯೆಲ್ಲಿ ? ಅದೂ ನೂರಾರು ಜನರಿಗೆ. ಈ ಲೆಕ್ಕಾಚಾರವನ್ನು ಹಾಕುವ ಮನಸ್ಸು

ಮೃತ್ಯುಂಜಯಸ್ವಾಮಿಗಳದಲ್ಲ. ಒಟ್ಟು ಮಠಕ್ಕೆ ಬಂದವರದು ಪ್ರಸಾದವಾಗಬೇಕು. ಅವರ ವಾಣಿಯನ್ನು ತಪ್ಪದೆ ಪರಿಪಾಲಿಸುವ ಜನರೂ ಅಲ್ಲಿದ್ದರು. ಅವರ ನೆರಳಾಗಿದ್ದ ಮಹಾಂತಪ್ಪಗಳು ಯಾವ ಕಾರ್ಯವನ್ನು ಹೇಗೆ ಸಾಧಿಸಬೇಕೆಂಬುದು ತಿಳಿದವರು. ಒಂದು ಘಂಟೆಯಲ್ಲಿ ಪ್ರಸಾದ ಸಿದ್ಧಪಡಿಸಿ ಬಂದವರನ್ನು ತೃಪ್ತಿಪಡಿಸಿದರು. ಇಂಥ ಘಟನೆಗಳನ್ನು ನೂರಾರು ಜನ ಹೇಳುತ್ತಾರೆ. ಮುರುಘಾಮಠದ ಬೆಳಕು ಸುತ್ತೆಲ್ಲ ಪಸರಿಸಿದುದು ಈ ಔದಾರ್ಯದ ಫಲವಾಗಿ.

ಜ್ಞಾನದಾಸೋಹ, ಅನ್ನದಾಸೋಹಗಳು ಮುರುಘಾಮಠದಲ್ಲಿ ನಿತ್ಯವೂ ನಡೆಯುತ್ತ ಬಂದಿವೆ. ವರುಷವರುಷ ಲಕ್ಷಾಂತರ ಜನರಿಗೆ ಪ್ರಸಾದವಾಗಬೇಕು. ಜಾತ್ರೆಯ ಕಾಲಕ್ಕೆ ಹತ್ತು ಸಾವಿರಗಟ್ಟಲೆ ಜನರಿಗೆ ಪ್ರಸಾದವಾಗಬೇಕು. ಈ ಮಠಕ್ಕೆ ತನ್ನದೇ ಆದ ಆಸ್ತಿಯಿಲ್ಲ. ಶ್ರೀಮಂತ ಮಠವಲ್ಲ. ಒಂದು ಕಡೆಗೆ ಜನ ತಮ್ಮ ಪ್ರಾಪ್ತಿಯ ಕೆಲಭಾಗ ಮಠಕ್ಕೆ ಮುಟ್ಟಲಿ ಎಂದು ನಿತ್ಯವೂ ಕಳಿಸುತ್ತಾರೆ. ಇನ್ನೊಂದು ಕಡೆಗೆ ಜನ ಬಂದು ಪ್ರಸಾದ ಸ್ವೀಕರಿಸುತ್ತಾರೆ. 'ಕೊಡುವಾತಂ ಸಂಗಂ ಕೊಂಡಾತಂ ಸಂಗಂ' ಎಂಬ ಮಾತು ಮುರುಘಾಮಠದಲ್ಲಿ ನಿತ್ಯವೂ ಪ್ರತ್ಯಕ್ಷವಾಗುತ್ತಿದೆ. 'ಅನ್ನದಾನದ ಮುಂದೆ ಇನ್ನು ದಾನಗಳಿಲ್ಲ' ಎಂಬುದು ಇಲ್ಲಿ ದಿಟವಾಗಿದೆ.

## ಹಂಸಭಾವಿ ವಿದ್ಯಾಪೀಠ

ಧಾರವಾಡ ಆವರಣವು ಗುರುಕುಲ, ಶಿವಾನುಭವ ಸಂಸ್ಥೆ, ಬಾಲಲೀಲಾ ಮಹಾಂತಶಿವಯೋಗೀಶ್ವರ ಗ್ರಂಥಮಾಲೆ, ರಥೋತ್ಸವ, ಶಿವಾನುಭವಕಾರ್ಯಕ್ರಮಗಳು ವಿಾಸಲಾಗಿದ್ದರೆ, ಬೇರೆ ಹಲವೆಡೆ ಮೃತ್ಯುಂಜಯಮಹಾಸ್ವಾಮಿಗಳ ಹೆಸರಿನಲ್ಲಿ ಶಿಕ್ಷಣ ಸಂಸ್ಥೆಗಳು ತಲೆಯೆತ್ತಿವೆ. ಅವುಗಳಲ್ಲಿ ಹಂಸಭಾವಿಯ ವಿದ್ಯಾಪೀಠ ಮುಖ್ಯವಾದುದು. ಹಂಸಭಾವಿ ಒಳ್ಳೆಯ ಆಯಕಟ್ಟಿನ ಸ್ಥಳ. ವೀರಶೈವದ ಎರಡು ಪಂಗಡಗಳು ಕೂಡುವ ಸ್ಥಳ. ಅಲ್ಲಿಂದಾಚೆಗೆ ಒಂದು ಸಂಪ್ರದಾಯದ, ಈಚೆಗೆ ಇನ್ನೊಂದು ಸಂಪ್ರದಾಯದ ವೀರಶೈವರಿದ್ದಾರೆ. ಈಗಾಗಲೇ ಛಿನ್ನವಿಛಿನ್ನವಾಗಿ ಹೋಗಿರುವ ಸಮಾಜ ಇನ್ನೂ ಒಡೆದು ಸಿಡಿದು ಹೋಗಬಾರದು, ಇವೆಲ್ಲ

ಒಂದುಗೂಡಿ ಇಡಿಯಾಗಬೇಕು ಎಂಬ ಉದ್ದೇಶದಿಂದ ಹಂಸಭಾವಿಯಲ್ಲಿ ಒಂದು ವಿದ್ಯಾಪೀಠ ಸ್ಥಾಪನೆಗೊಂಡಿತು. ಅದಕ್ಕೆ 'ಮೃತ್ಯುಂಜಯ ವಿದ್ಯಾಪೀಠ'ವೆಂದು ನಾಮಕರಣ ಮಾಡಲಾಯಿತು. ಸ್ವಾಮಿಗಳು ಆ ಭಾಗದಲ್ಲಿ ಸಂಚರಿಸಿ ಶೈಕ್ಷಣಿಕ ಪ್ರಗತಿಯನ್ನುಂಟುಮಾಡಿದರು. ಶ್ರೀ ಆರ್. ಎಸ್. ಪಾಟೀಲ ಅವರ ಇಚ್ಛೆಯಂತೆ ಹಂಸಭಾವಿಯ ಮುಖಂಡರೆಲ್ಲ ಸೇರಿ ೧೯೧೮ರಲ್ಲಿ ಆಂಗ್ಲೋವರ್ನಾಕ್ಯೂಲರ್ ಸ್ಕೂಲನ್ನು ಪ್ರಾರಂಭಿಸಿದರು. ಅದೇ ಮೃತ್ಯುಂಜಯ ವಿದ್ಯಾಪೀಠದ ಉದಯ. ಮೃತ್ಯುಂಜಯಸ್ವಾಮಿಗಳ ಪ್ರೇರಣೆ ಅದಕ್ಕೆ ಕಾರಣವಾಯಿತು. ತೀರ ಹಳ್ಳಿಯ ಪ್ರದೇಶದಲ್ಲಿ ಒಂದು ಇಂಗ್ಲಿಷ್ ಶಾಲೆ ಪ್ರಾರಂಭವಾದುದು ಇದೇ ಮೊದಲ ಸಲ. ಬೇರೆ ಕಡೆಯಿಂದ ಬರುತ್ತಿರುವ ಬಡವಿದ್ಯಾರ್ಥಿಗಳಿಗೆ ವಾಡಿಕೆಯಂತೆ ಮೃತ್ಯುಂಜಯ ಸ್ವಾಮಿಗಳು ಪ್ರಸಾದನಿಲಯವನ್ನು ಸ್ಥಾಪಿಸಿದರು. ಅಲ್ಲಿಯೂ ಮುಷ್ಟಿ ಫಂಡಿನ ಯೋಜನೆ ಕಾರ್ಯಗತವಾಯಿತು, ಹಿಂದೆ ದಾವಣಗೇರಿಯಲ್ಲಿ ಆದಂತೆ ; ಊರೂರನ್ನು ಸುತ್ತಿ ಧಾನ್ಯಸಂಗ್ರಹಿಸುವ ಕಾರ್ಯವೂ ನಡೆಯಿತು. ಮೃತ್ಯುಂಜಯಸ್ವಾಮಿಗಳ ಆಧ್ಯಾತ್ಮಿಕ ಶಕ್ತಿ ಅಲ್ಲಿಯ ಅನೇಕ ಜನರಲ್ಲಿ ತನ್ನ ಪ್ರಭಾವವನ್ನು ಬೀರಿ ಆಂಗ್ಲೊವರ್ನಾಕ್ಯೂಲರ್ ಸ್ಕೂಲು ಒಂದು ಪೂರ್ಣಮಟ್ಟದ ಶಾಲೆಯಾಗುವಂತೆ ಮಾಡಿತು. ಅಲ್ಲಿಯ ಜನರು ಕೈಮುಟ್ಟಿ ಕೆಲಸ ಮಾಡಿ ಶಾಲೆಗೊಂದು ಕಟ್ಟಡವನ್ನು ಕಟ್ಟಿದರು. ಪೂರ್ಣಪ್ರಮಾಣದ ಹೈಸ್ಕೂಲಿಗೆ ದುರ್ಗದ ಎಂಬವರ ಹೆಸರಿಡಲು ಹೇಳಿ, ಮೃತ್ಯುಂಜಯ ಸ್ವಾಮಿಗಳು ಆ ಕಾಲಕ್ಕೆ ಅದರಿಂದ ೨೫ ಸಾವಿರ ರೂಪಾಯಿ ನಿಧಿಯನ್ನು ಸಂಸ್ಥೆಗಾಗಿ ಪಡೆದರು. ಈಗ ಈ ಸಂಸ್ಥೆ ಒಂದು ಪೂರ್ಣಪದವಿಯ ಕಾಲೇಜು, ಹೆಣ್ಣುಮಕ್ಕಳ ಹೈಸ್ಕೂಲ್, ಅವರಿಗಾಗಿ ಒಂದು ಪ್ರಸಾದನಿಲಯ, ಪೊಲಿಟೆಕ್ನಿಕ್ ಮುಂತಾದ ಸಂಸ್ಥೆಗಳನ್ನು ಪಡೆದು ಒಂದು ದೊಡ್ಡ ವಿದ್ಯಾಕೇಂದ್ರವಾಗಿದೆ. ಮುಂದೆ ಒಂದು ಕಾಲಕ್ಕೆ ಅದು ಸ್ವತಂತ್ರ ವಿದ್ಯಾಪೀಠವೆಂದು ಮನ್ನಣೆ ಪಡೆದರೆ ಆಶ್ಚರ್ಯಪಡಬೇಕಿಲ್ಲ. ಒಂದು ಹಳ್ಳಿಯಲ್ಲಿ ಇಂಥದೊಂದು ದೊಡ್ಡ ವಿದ್ಯಾಪೀಠ ಬೆಳೆದು ನಿಂತುದು ಮೃತ್ಯುಂಜಯಮಹಾಸ್ವಾಮಿಗಳ ಪವಾಡ ಸದೃಶವಾದ ಕರ್ತೃತ್ವಶಕ್ತಿಯ ಫಲ. ಹೋರಾಟಕ್ಕಿಳಿಯಬೇಕಾಗಿದ್ದ ಎರಡು ಕೋಮುಗಳು ಒಂದುಗೂಡಿ ಇಡೀ ನಾಡಿಗೆ ಆದರ್ಶಪ್ರಾಯವಾದ ಕಾರ್ಯಮಾಡಿ ತೋರಿಸಿರುವವು. ರೆಸಿಡೆನ್ಸಿಯಲ್ ಸ್ಕೂಲಿನ ಪ್ರಯೋಗವನ್ನು ಇಂದಿಗೆ ೫೦–೬೦ ವರ್ಷಗಳ

ಹಿಂದೆ ಅಲ್ಲಿಯ ಶಿಕ್ಷಕರು ಮಾಡಿ ತೋರಿಸಿದ್ದರು. ತಮ್ಮ ತಮ್ಮ ಮನೆಗಳಲ್ಲಿ ವಾಸಿಸುವ ಸ್ಥಳೀಯ ವಿದ್ಯಾರ್ಥಿಗಳ ಅಭ್ಯಾಸದ ಪ್ರಗತಿಯನ್ನೂ, ಅವರ ಯೋಗಕ್ಷೇಮವನ್ನೂ ದಿನದಿನವೂ ನೋಡಿಕೊಳ್ಳುವ ಒಂದು ಯೋಜನೆಯನ್ನು ಅಲ್ಲಿಯ ಶಿಕ್ಷಕರು ರೂಪಿಸಿಕೊಂಡಿದ್ದರು. ಅಲ್ಲಿಯ ಶಿಕ್ಷಕರು ಒಟ್ಟು ವಿದ್ಯಾರ್ಥಿಗಳನ್ನು ತಮ್ಮೊಳಗೆ ಹಂಚಿಕೊಂಡು ಅವರವರ ಮನೆಗಳಿಗೆ ಹೋಗಿ ಅವರ ಪ್ರಗತಿಯನ್ನು ವೀಕ್ಷಿಸುತ್ತಿದ್ದರು. ಅವರ ಕಡೆಯಿಂದ ಬರೆಸುತ್ತಿದ್ದರು ; ತಿದ್ದುತ್ತಿದ್ದರು. ಇಂಥ ಮೇಲ್ವಿಚಾರಣೆಯಿಂದಾಗಿ ಹಂಸಭಾವಿ ವಿದ್ಯಾರ್ಥಿಗಳು ಯಾವಾಗಲೂ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗುತ್ತಿದ್ದರು. ಆದರ್ಶ ವಿದ್ಯಾರ್ಥಿಗಳು ಅಲ್ಲಿಂದ ಹೊರಬರುತ್ತಿದ್ದರು. ಆದರ್ಶ ಶಿಕ್ಷಕರೂ ಅಲ್ಲಿಂದ ಬಂದಿದ್ದಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಅಗ್ರಪಾತ್ರವಹಿಸಿದ ಕೆ. ಎಫ್. ಪಾಟೀಲ, ಟಿ. ಆರ್. ನೇಶ್ವಿ ಮತ್ತು ಅನೇಕ ಜನರು ಆ ಶಾಲೆಯಿಂದ ಬಂದವರು. ಸ್ವಾತಂತ್ರ್ಯಹೋರಾಟದಲ್ಲಿ ಬಲಿದಾನಗೈದವರೂ ಜೈಲುವಾಸ ಕಂಡವರೂ ಕಠಿಣಶಿಕ್ಷೆಗೆ ಗುರಿಯಾದವರೂ ಹೆಚ್ಚಾಗಿ ಈ ಪರಿಸರದಿಂದ ಬಂದವರೇ ಆಗಿದ್ದರು. ಎಲ್ಲಕ್ಕೂ ಆ ಸಂಸ್ಥೆಯ ಮುಂದಿದ್ದ ಆದರ್ಶ, ಮೇಲಿದ್ದ ಮಹಾತ್ಮರ ಆಶೀರ್ವಾದ ಇದೇ ಕಾರಣವೆಂದು ಹೇಳಬಹುದು.

## ಮಹಾಂತದೇವರು

ಮೃತ್ಯುಂಜಯ ಮಹಾಸ್ವಾಮಿಗಳ ಮಹೋನ್ನತ ಸಿದ್ಧಿಯೆಂದರೆ ಮಹಾಂತದೇವರಂಥ ಮರಿಗಳನ್ನು ರೂಪಿಸಿದುದು. ಒಮ್ಮೆ ಪ್ರಯಾಣದಲ್ಲಿದ್ದಾಗ ಅಪ್ಪಗಳು ಪಶುಪತಿಹಾಳ ಗ್ರಾಮಕ್ಕೆ ಹೋಗಿದ್ದರು. ಅಲ್ಲಿ ಒಂದು ಜಂಗಮ ಮನೆತನ. ಮಹಾಂತೇಶನೆಂಬ ಮಗನಿದ್ದನು, ಆ ದಂಪತಿಗಳಿಗೆ. ಮಗುವಿನ ಮುಖದ ಮೇಲೆ ವೈರಾಗ್ಯದ ಕಳೆ. ಮೃತ್ಯುಂಜಯಸ್ವಾಮಿಗಳಿಗೆ ಆ ಮಗುವನ್ನು ಕಂಡೊಡನೆ ಏನೋ ಒಂದು ಆಕರ್ಷಣೆ. ಮಹಾಸ್ವಾಮಿಗಳು ಯಾವುದನ್ನೂ ಬೇಡುವವರಲ್ಲ. ಬೇಕೆಂಬ ಭಾವನೆಯ ಬೇರುಗಳನ್ನೇ ಕಿತ್ತೆಸೆದ ವೀರವಿರಾಗ ಪುರುಷರವರು. ಆ ಮಗುವಿನ ಮೇಲೆ ಅವರ ಕೃಪಾದೃಷ್ಟಿ ಬಿದ್ದುದನ್ನು ತಂದೆ–ತಾಯಿಗಳೂ ಪಶುಪತಿಹಾಳದ ಮಿಕ್ಕಜನರೂ ನೋಡಿದ್ದರು. ಅಲ್ಲದೆ ಮಗುವಿನ

ಮುಗ್ಧಸ್ಥಿತಿ ವೈರಾಗ್ಯದ ಭಾವನೆಗಳನ್ನು ಮೊದಲಿನಿಂದಲೂ ಗಮನಿಸಿದ್ದ ತಂದೆ–ತಾಯಿಗಳಿಗೆ ಯಾವುದೊಂದು ಮಠಕ್ಕೆ 'ಮರಿ' ಬಿಡುವ ವಿಚಾರ ಆಗೊಮ್ಮೆ ಈಗೊಮ್ಮೆ ಬಂದು ಹೋಗುತ್ತಿತ್ತು. ಈಗ ಸ್ವತಃ ಮೃತ್ಯುಂಜಯಸ್ವಾಮಿಗಳಂಥ ದಿವ್ಯಪುರುಷರು ಊರಿಗೆ ದಯಮಾಡಿಸಿ, ಮನೆಗೆ ಬಿಜಯಂಗೈದು ಮಗುವಿನ ವಿಷಯವಾಗಿ ಅಪಾರ ಅಂತಃಕರಣ ವ್ಯಕ್ತಪಡಿಸಿದುದರಿಂದ ತಂದೆ–ತಾಯಿಗಳಿಗೆ ಈ ಸುಸಂಧಿಯನ್ನು ಕಳೆದುಕೊಳ್ಳಬಾರದೆಂದೆನಿಸಿತು. ಮೃತ್ಯುಂಜಯಸ್ವಾಮಿಗಳೆಂದರೆ 'ದ್ವಿತೀಯಶಂಭು'. ಶಿವಯೋಗಿಗಳ ಸಾಕ್ಷಾತ್ ಸುಪುತ್ರರು. ತ್ರಿವಿಧ ದಾಸೋಹಮೂರ್ತಿಗಳು ಎಂಬ ಭಾವನೆ ಆಗ ನಾಡಿನ ತುಂಬ ಪಸರಿಸಿತ್ತು. ಇಂಥವರ ಸಾನ್ನಿಧ್ಯದಲ್ಲಿ ಮಗು ಬೆಳೆದರೆ ಆತನ ಭವಿಷ್ಯ ಉಜ್ವಲವಾಗುವುದು. ಮನೆತನಕ್ಕೂ ನಾಡಿಗೂ ಕೀರ್ತಿ ಬರುವುದು ಎಂದು ಭಾವಿಸಿ ತಂದೆ–ತಾಯಿಗಳು ಮರುದಿನ ಮಗುವನ್ನು ಶ್ರೀಗಳವರಿಗೆ ಸಂತೋಷದಿಂದ ಅರ್ಪಿಸಿದರು. ಮೃತ್ಯುಂಜಯಮಹಾಸ್ವಾಮಿಗಳು ಅಷ್ಟೇ ಸಂತೋಷದಿಂದ ಸ್ವೀಕರಿಸಿದರು. ಈಗ ಇತರ ಧಾರ್ಮಿಕ ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಮಹಾಂತದೇವರನ್ನೂ ಕಂಡರಿಸುವ ಕಾರ್ಯವೊಂದು ಶ್ರೀಗಳವರ ಮೇಲೆ ಬಿದ್ದಿತು. ಹಿಂದೆ ಜೈಪುರದ ಶಿಲೆಯಲ್ಲಿ ಶಿವಯೋಗಿಗಳ ಸಾಕ್ಷಾತ್ ಜೀವಕಳೆಯನ್ನು ಹೊರ ಹೊಮ್ಮಿಸುವ ಕಾರ್ಯದಲ್ಲಿ ಶಿಲ್ಪಿಗೆ ಮೃತ್ಯುಂಜಯಸ್ವಾಮಿಗಳು ನೆರವಾಗಿದ್ದರು. ಈಗ ಸ್ವತಃ ತಾವೇ ಶಿಲ್ಪಿಗಳಾಗಿ ಮಹಾಂತದೇವರನ್ನು ಮೂರ್ತಿಗೊಳಿಸುವ ಕಾರ್ಯಕೈಕೊಂಡರು. ಸಂಸ್ಕೃತ–ಕನ್ನಡಗಳ ಅಧ್ಯಯನ ಮಾಡಿಸಿದರು. ವಟು ಮಹಾಂತೇಶ ಬಹಳ ಕುಶಾಗ್ರಬುದ್ಧಿಯವರು. ಓದಿದ ಗ್ರಂಥಗಳೆಲ್ಲ ಅವರ ಹೃದಯದಲ್ಲಿ ಅರಳುತ್ತಿದ್ದವು. ವಚನ ಸಾಹಿತ್ಯ, ವೀರಶೈವ ಸಾಹಿತ್ಯ, ಸಂಸ್ಕೃತ ಕಾವ್ಯ ಮುಂತಾದವುಗಳ ಅಧ್ಯಯನ ಸರಿಯಾಗಿ ನಡೆಯಿತು. ಅಧ್ಯಯನಕ್ಕೆಂದು ಮೃತ್ಯುಂಜಯಸ್ವಾಮಿಗಳು ಮಹಾಂತದೇವರನ್ನು ಬೇರೆ ಎಲ್ಲಿಯೂ ಕಳಿಸಿಕೊಡಲಿಲ್ಲ. ಧಾರವಾಡದ ಮಠದಲ್ಲಿಯೇ ಅವರ ಅಭ್ಯಾಸ ಮುಂದುವರಿಯಿತು. ಮೃತ್ಯುಂಜಯಸ್ವಾಮಿಗಳು ಒಂದು ನಿಮಿಷವೂ ಅವರನ್ನು ಬಿಟ್ಟು ಅಗಲುತ್ತಿರಲಿಲ್ಲ. ತಾವೇ ಮರಿದೇವರಿಗೆ ಪಾಠವಾಗಿ, ಪಥ್ಯವಾಗಿ ನಿಂತರು. ತಾಯಿ–ತಂದೆಗಳನ್ನು ಅಗಲಿಸಿ ತಂದ ಮಗುವಿನ ಮೇಲೆ ಅವರಿಗಿಂತಲೂ ಹೆಚ್ಚಿನ ವಾತ್ಸಲ್ಯವರ್ಷವನ್ನು ಸುರಿಸಿದರು.

ಮಹಾಂತದೇವರಾದರೂ ಸೇವಾಭಾವನೆಗೆ ಮಿಗಿಲಾದವರು. ಅವರಂಥ ಸೇವಾಭಾವನೆಯುವರು ತೀರ ವಿರಳ. ಆ ನಿಷ್ಠೆ, ಆ ತ್ಯಾಗ, ಆ ಪ್ರೇಮ ಅಪ್ರತಿಮ. ನಾಲ್ಕಾರು ವರ್ಷ ಕಳೆದ ಕೂಡಲೇ ಗುರುಗಳು ಎಲ್ಲ ಕಾರ್ಯವನ್ನೂ ಮಹಾಂತಪ್ಪಗಳಿಗೇ ವಹಿಸಿಕೊಡಲಾರಂಭಿಸಿದರು. ಅದನ್ನು ಅವರು ನಿಷ್ಠೆಯಿಂದ, ಭಕ್ತಿಯಿಂದ ಪಾಲಿಸುತ್ತಿದ್ದರು. ತಾವು ನಿಮಿತ್ತ ಮಾತ್ರ, ಮಹಾಂತದೇವರೇ ಕ್ರಿಯಾಮೂರ್ತಿಗಳೆಂದು ಮತ್ತೆ ಮತ್ತೆ ಹೇಳುತ್ತಿದ್ದರು. ಮಹಾಂತದೇವರ ಸೇವೆಯನ್ನು ನೋಡುವುದು, ನೆನೆಯುವುದು ಒಂದು ಪುಣ್ಯವಿಶೇಷ. ಶ್ರೀಗಳವರನ್ನು ಒಂದು ಮಂಚದ ಮೇಲೆ ಪವಡಿಸಿ ತಾವು ಕೆಳಗೆ ಒಂದು ಚಾಪೆ ಹಾಸಿಕೊಂಡು ಮಲಗುವರು. ಗಾಳಿ ಗಿರಿಕೆಂದಡೆ ಅಪ್ಪಗಳ ನಿದ್ರೆಗೆ ಎಲ್ಲಿ ಭಂಗ ಉಂಟಾಗುತ್ತದೆಯೋ ಎಂದು ಅತ್ತಿತ್ತ ಎದ್ದು ನೋಡುವರು. ಅವರು ಏಳುವ ಮುನ್ನವೇ ಎದ್ದು, ಸ್ನಾನ–ಪೂಜಾದಿಗಳಿಗೆ ಅಣಿಗೊಳಿಸುವರು. ತ್ರಿಕಾಲಪೂಜೆಯು ಕರಣಪ್ರಸಾದ ನಿರಂತರ ನಡೆದವು. ಪತ್ರೆ, ಪುಷ್ಪಗಳು ಅಪ್ಪಗಳ ಪೂಜೆಗೆ ಎಷ್ಟು ಚೆಂದವೆಂದು ಅದನ್ನು ಎತ್ತುವುದರಲ್ಲಿ ಅವರಿಗೆ ಸಂತೋಷ.

ಇದು ಆಂತರಿಕ ಸೇವೆಯ ವಿಷಯ. ಹೊರಗೆ ಮೃತ್ಯುಂಜಯ ಸ್ವಾಮಿಗಳು ಕೈಕೊಂಡ ಎಲ್ಲ ಧಾರ್ಮಿಕ–ಸಾಮಾಜಿಕ–ಶೈಕ್ಷಣಿಕ ಕಾರ್ಯಗಳನ್ನೂ ನೋಡಿಕೊಳ್ಳಬೇಕು. ಶ್ರೀ ಮುರುಘಾಮಠದ ವೈಶಿಷ್ಟ್ಯವಾದ ಪ್ರಸಾದ, ಯಾರು ಯಾವಾಗ ಬಂದರೂ ಸಿದ್ಧವಾಗಿರಬೇಕು. ನೂರುಮಂದಿ ಬಂದರೂ ಪ್ರಸಾದವಿಲ್ಲದೆ ಹೋಗುವಂತಿರಲಿಲ್ಲ. ಇಂತಹ ಆಕಸ್ಮಿಕಗಳನ್ನೆಲ್ಲ ಮಹಾಂತದೇವರು ದಕ್ಷವಾಗಿ ನೆರವೇರಿಸುವರು. ಯಾವುದು ಬಂದಿತು, ಯಾವುದು ಹೋಯಿತು ಎಂಬ ವಿಷಯವನ್ನೆಲ್ಲ ಸೂಕ್ಷ್ಮವಾಗಿ ಪರಿಶೀಲಿಸುವರು. ಪ್ರಸಾದನಿಲಯದಂಥ ದೊಡ್ಡ ಸಂಸ್ಥೆಯ ಮೇಲ್ವಿಚಾರಣೆ ನಡೆಯಬೇಕು. ನಾಲ್ಕೈದು ನೂರು ವಿದ್ಯಾರ್ಥಿಗಳ ಯೋಗಕ್ಷೇಮ ; ಪ್ರಸಾದ ವಿತರಣೆ ಇವೆಲ್ಲ ಚಾಚೂ ತಪ್ಪದೆ ನಡೆಯಬೇಕು. ಗದ್ದುಗೆಯ ರುದ್ರಾಭಿಷೇಕ, ಪೂಜಾಕಾರ್ಯ, ಮಠಕ್ಕೆ ಬಂದ ಅತಿಥಿಗಳನ್ನು ನೋಡಿಕೊಳ್ಳುವುದು–ಹೀಗೆ ಸಾವಿರ ಕೆಲಸಗಳನ್ನು ಸಮಾಧಾನ ಮನಸ್ಕರಾಗಿ ಪೂರೈಸಬೇಕು. ಮೃತ್ಯುಂಜಯಪ್ಪಗಳ ದಿವ್ಯಶಕ್ತಿ ಅವರ ಬೆಂಗಾವಲಾಗಿದ್ದುದು ಒಂದು. ಶಿವಯೋಗಿಗಳ ಕೃಪೆ ನಿರಂತರವಿದ್ದುದೊಂದು–ಇವುಗಳಿಂದಾಗಿ ಮಹಾಂತಪ್ಪಗಳು ಮುರುಘಾಮಠದ ಕಾರ್ಯಗಳನ್ನು ಬಹಳ ಯಶಸ್ವಿಯಾಗಿ

ಪೂರೈಸತೊಡಗಿದರು. ಇವೆಲ್ಲವುಗಳ ಮಧ್ಯ ಅಂತರಂಗದ ಆತ್ಮಶುದ್ಧಿಯ ಕಾರ್ಯ ಲಿಂಗಮೆಚ್ಚಿ ಅಹುದೆನ್ನುವಂತೆ ನಡೆಯುತ್ತಿದ್ದಿತು. ಭಕ್ತಿಯಿಂದ ಎಂತಹ ಜ್ಞಾನ-ಕ್ರಿಯೆಗಳೂ ಸಾಧ್ಯವಾಗಬಹುದೆಂಬುದಕ್ಕೆ ಮೃತ್ಯುಂಜಯಪ್ಪಗಳೂ ಮಹಾಂತಪ್ಪಗಳೂ ನಿದರ್ಶನ. ಆ ದಾಸೋಹಂಭಾವದಲ್ಲಿ ನಾನೆಂಬ ಅಹಂಕಾರದ ಪರದೆ ಪೂರ್ತಿ ಹರಿದು ಹೋಗುವುದರಿಂದ ಆತ್ಮಕ್ಕೆ ಅಂಟಿಕೊಂಡ ಆಣವ-ಮಾಯಾ-ಕಾರ್ಮಿಕ ಮಲಗಳು ತಂತಾನೆ ಕತ್ತರಿಸಿ ಹೋಗುತ್ತವೆ. ಹೀಗಾಗಿದೆ, ಮಹಾಂತಪ್ಪಗಳ ಸ್ಥಿತಿ. ಅಥಣಿಯ ಶಿವಯೋಗಿಗಳನ್ನು ಆರಾಧಿಸಿ, ಸೇವಿಸಿ ತ್ರಿಕರಣದಲ್ಲಿ ಅವರನ್ನೇ ಮೂರ್ತ ಮಾಡಿಕೊಂಡ ಮೃತ್ಯುಂಜಯಪ್ಪಗಳನ್ನು ನೋಡಿದ್ದೇವೆ. ಅದೇ ಹಾದಿಯಲ್ಲಿ ಮಹಾಂತಪ್ಪಗಳು ನಡೆದರು. ಶಿವಯೋಗಿಗಳೂ ಮೃತ್ಯುಂಜಯಪ್ಪಗಳೂ ಇದ್ದಂತೆ ಮಹಾಂತದೇವರು-ಮೃತ್ಯುಂಜಯಪ್ಪಗಳ ಜೋಡಿ ಸಿದ್ಧವಾಯಿತು. ತ್ರಿವಿಧ ದಾಸೋಹ ನಡೆಯಿತು. ಶ್ರೀ ಮುರುಘಾಮಠ 'ಅಭಿನವ ಕಲ್ಯಾಣ'ವಾಯಿತು. ಬಸವಾದಿ ಪ್ರಮಥರ ಅನುಭವಮಂಟಪ ಮರಳಿ ಮೂಡಿದಂತಾಯಿತು. ಮೃತ್ಯುಂಜಯಃಸ್ವಾಮಿಗಳ ಹೆಸರು ಕರ್ನಾಟಕ-ಮಹಾರಾಷ್ಟ್ರ-ಆಂಧ್ರಪ್ರದೇಶಗಳವರಗೆ ಹಬ್ಬಿತು. ಕಳ್ಳಿ-ಕಂಟಿಗಳ ಮಧ್ಯದಲ್ಲಿ ಇದ್ದ ಮೂರಂಕಣದ ಮುರುಕು ಮಠವೊಂದು ಮಹಾಸಂಸ್ಥೆಯಾಗಿ ಬೆಳೆಯಿತು. ವ್ಯವಸ್ಥಿತ ಆಧ್ಯಾತ್ಮಿಕ ವಿಶ್ವವಿದ್ಯಾಲಯದ ಯೋಗ್ಯತೆಯನ್ನು ಪಡೆಯುವಷ್ಟು ಕಟ್ಟಡಗಳಾದವು. ಮೊದಲು ಚಿಕ್ಕದಾಗಿದ್ದ ಸಭಾಮಂಟಪವನ್ನು ವಿಸ್ತರಿಸಿ, ಹೊಸಮಾದರಿಯಲ್ಲಿ ಕಟ್ಟಿಸಲಾಯಿತು. ಅತಿಥಿಗೃಹ, ಪೂಜಾಸ್ಥಳ ಇಂಥ ಎಲ್ಲ ಸೌಕರ್ಯಗಳಿಂದ ಶ್ರೀಮಠ ಇಂದು ಆದರ್ಶ ಗುರುಕುಲವಾಗಿದೆ.

ಬೆಳ್ಳಿಹಬ್ಬದ ಕನಸು ಸುಳ್ಳಾಗಲಿಲ್ಲ. ಚಿನ್ನದ ಹಬ್ಬಕ್ಕೆ ಬರುವ ಹೊತ್ತಿಗೆ ಶ್ರೀಮಠ ಆಧ್ಯಾತ್ಮಿಕ ವೈಭವದ ಜೊತೆಗೆ ಪ್ರಾಕೃತಿಕ ವೈಭವವನ್ನೂ ಪಡೆಯಿತು. ಸುವರ್ಣಮಹೋತ್ಸವ ವೈಭವಪೂರ್ಣವಾಗಿ ನೆರವೇರಿತು. ಕೇಂದ್ರದಿಂದ ಬಂದ ಶ್ರೀ ಕರಣಸಿಂಗರಂಥ ವಿದ್ವನ್ಮಣಿಗಳು ವೀರಶೈವ ಸಂಸ್ಕೃತಿ, ಶರಣರ ನಡೆ-ನುಡಿ, ಶ್ರೀ ಮುರುಘಾಮಠದ ಕಾರ್ಯವೈಭವಗಳನ್ನೆಲ್ಲ ಮನಸಾರೆ ಮೆಚ್ಚಿದರು. ಕರ್ನಾಟಕದ ಒಳ-ಹೊರಗಿನ ವಿದ್ವನ್ಮಣಿಗಳು ಶ್ರೀಮಠದ ಕಾರ್ಯವನ್ನು ಬಹುವಾಗಿ ಮೆಚ್ಚಿಕೊಂಡರು. ಒಂದು ಮತದವರಲ್ಲ, ಎಲ್ಲ ಮತದವರೂ ಇಲ್ಲಿಗೆ ಬಂದು ಶ್ರೀಗಳವರ

ದರ್ಶನಾಶೀರ್ವಾದ ಪಡೆಯುತ್ತಿದ್ದರು. ಮೃತ್ಯುಂಜಯ ಮಹಾಸ್ವಾಮಿಗಳಲ್ಲಿ ತರತಮಭಾವನೆಯೇ ಇರಲಿಲ್ಲ. ಯಾರು ಬಂದರೂ ಅವರನ್ನು 'ಪರಮಾತ್ಮ' ರೂಪದಲ್ಲಿ ಕಾಣುವ ದೃಷ್ಟಿ ಅವರಿಗಿತ್ತು. ಅವರವರ ಧರ್ಮ ಭಾವನೆಗಳಿಗೆ ತಕ್ಕಂತೆ ಅವರವರು ನಡೆದುಕೊಂಡು ಎಲ್ಲರೂ ಸದ್ಗತಿ ಹೊಂದಬೇಕು. ಸ್ವಧರ್ಮದಲ್ಲಿ ನಿಷ್ಠೆ, ಪರಧರ್ಮದಲ್ಲಿ ಸಹಿಷ್ಣುತೆ ಇವು ಬೆಳೆಯಬೇಕೆಂಬುದೇ ಮೃತ್ಯುಂಜಯಮಹಾಸ್ವಾಮಿಗಳ ಉಪದೇಶದ ಸಾರವಾಗಿದ್ದಿತು.

ಈ ಬಗೆಯ ಉಪದೇಶ, ಕೈಕೊಂಡ ಮಹೋನ್ನತ ಧಾರ್ಮಿಕ ಸಾಮಾಜಿಕ ಕಾರ್ಯ, ತಪಃಪ್ರಭಾವ–ಇವುಗಳಿಂದ ಧಾರವಾಡದ ಹಾವೇರಿ ಪೇಟೆಗೆ ಒಂದು ಹೊಸದೀಕ್ಷೆ ಕೊಟ್ಟಂತಾಯಿತು. ಮೊದಲು ಬಡಿದಾಟ, ಕೊಲೆ, ಸುಲಿಗೆಗಳಿಗೆ ಹೆಸರಾಗಿದ್ದ ಈ ಪೇಟೆ ಈಗ ಭಕ್ತರ ಬೀಡಾಯಿತು. ಮೃತ್ಯುಂಜಯಪ್ಪಗಳ ಪ್ರಭಾವ ಅವರ ಮನಸ್ಸನ್ನೆಲ್ಲ ಪರಿವರ್ತನಗೊಳಿಸಿತು. ಅದರ ಫಲವಾಗಿ 'ಮೃತ್ಯುಂಜಯನಗರ'ವೆಂಬ ನಾಮವನ್ನೂ ಪಡೆಯಿತು. ಕೇವಲ ಹಾವೇರಿ ಪೇಟೆಯೇಕೆ ಇಡೀ ಧಾರವಾಡವೇ ಅಧ್ಯಾತ್ಮದ ಪ್ರಭಾವಕ್ಕೊಳಗಾಯಿತು. ಕನ್ನಡ ನಾಡಿನ ದಿವ್ಯಜ್ಯೋತಿಯಾಗಿ ಮೃತ್ಯುಂಜಯಮಹಾಸ್ವಾಮಿಗಳು ಬೆಳಗತೊಡಗಿದರು. ಅಜ್ಞಾನದ ಅಂಧಃಕಾರದಲ್ಲಿ ಮುಳುಗಿದ್ದ ವೀರಶೈವ ಸಮಾಜ ಈಗ ಎಚ್ಚತ್ತಿತ್ತು. ಸರ್ವಾಂಗೀಣ ಪ್ರಗತಿ ಪಡೆಯಿತು. ಮರ್ತ್ಯದ ಮಣಿಹವನ್ನು ಪೂರ್ಣಪ್ರಮಾಣದಲ್ಲಿ ಪೂರೈಸಿದ ಕೀರ್ತಿ ಅವರದಾಯಿತು.

## ಲಿಂಗೈಕ್ಯ

ಒಮ್ಮೆ ಮೃತ್ಯುಂಜಯಪ್ಪಗಳು ಇದ್ದಕ್ಕಿದ್ದಂತೆಯೇ ಕಣ್ಣಿನ ಬಾಧೆಗೊಳಗಾದರು. ಮೊದಮೊದಲು ಆಪರೇಶನ್ ಬೇಡವೆಂದರು. ಕೊನೆಗೆ ಆಪರೇಶನ್ ಮಾಡಿಸಿ, ಪುನಃ ದೃಷ್ಟಿ ಪಡೆದರು. ದೇಹ ಕ್ಷೀಣವಾಗತೊಡಗಿತು. ಆದರೂ ಸಂಚಾರದ ಕೆಲಸ ನಿಲ್ಲಲಿಲ್ಲ. ಮೃತ್ಯುಂಜಯಸ್ವಾಮಿಗಳು ನಿಜವಾದ ಅರ್ಥದಲ್ಲಿ ಜಂಗಮರು. "ಗಚ್ಛತಿ ಗಚ್ಛತಿ ಇತಿ ಜಂಗಮಃ"ಅಂದರೆ ಒಂದೆಡೆ ನಿಲ್ಲದೇ ಯಾವಾಗಲೂ ಚರಿಸುವುದು ಜಂಗಮ ಲಕ್ಷಣ. ಈ ರೀತಿ ಸಮಾಜದ ಚಿಂತನೆಗಾಗಿ ನಿಂತಲ್ಲಿ ನಿಲ್ಲದೆ ಅಪ್ಪಗಳು

ಮತ್ತೆಮತ್ತೆ ಸಂಚರಿಸತೊಡಗಿದರು. ಅವರು ನಡೆದರೆ ಶಿವಾನುಭವ ಮಂಟಪವೇ ನಡೆದುಬಂದಂತಾಗುತ್ತಿತ್ತು. ಎಲ್ಲಿ ಹೋದಲ್ಲಿ ಪ್ರಾರ್ಥನೆ, ಭಜನೆ, ಕೀರ್ತನೆ, ಉಪನ್ಯಾಸ, ಸಂಗೀತ, ಶರಣಗೋಷ್ಠಿ—ಇವೆಲ್ಲ ನಡೆಯಲೇಬೇಕು. ಇದೇ ಅವರ ಸಂಚಾರ. ಇಂತಹ ಒಂದು ಸಂಚಾರದ ಕಾಲದಲ್ಲಿ ಪ್ರಕೃತಿ ಕ್ಷೀಣವಾಯಿತು. ಕಾಲಿನ ನರಗಳು ದುರ್ಬಲವಾದವು. ವಿಪರೀತ ವೇದನೆ. ಕಾಣಲು ಯಾರು ಬಂದರೂ ಹಸುನ್ಮುಖಿಗಳಾಗಿ ಅವರ ಯೋಗಕ್ಷೇಮವನ್ನೇ ವಿಚಾರಿಸುವರು. ಕೊನೆಯ ಗಳಿಗೆಯವರೆಗೂ ಮಂಗಲೋಪದೇಶ ನಡೆದೇ ನಡೆಯಿತು.

ಅಂದು ಸೋಮವಾರ. ಸೂರ್ಯೋದಯದ ಸಮಯ. ಅತ್ತ ರವಿ ಮೂಡುತ್ತಿದ್ದ. ಮಂಚದ ಮೇಲೆ ಮಲಗಿದ್ದ ಮೃತ್ಯುಂಜಯಸ್ವಾಮಿಗಳು ಮಹಾಂತದೇವರನ್ನು ಕರೆದರು. ಪಾದೋದಕ ಕೊಡಬೇಕೆಂದು ಕೇಳಿದರು. ಬೆಳಗಿನ ಜಾವದಲ್ಲಿಯೇ ಒದ್ದೆಯ ಸ್ನಾನವಾಗಿದ್ದಿತು. ಹೌಹಾರಿ ಮಹಾಂತಸ್ವಾಮಿಗಳು ಪಾದೋದಕ ಕೊಟ್ಟರು. ಅದನ್ನು ಸ್ವೀಕರಿಸಿ, ಬಸವ ಬಸವ ಎನ್ನುತ್ತ ನಟ್ಟದೃಷ್ಟಿಯಿಂದ ಮಹಾಂತಪ್ಪಗಳನ್ನು ನೋಡಿದರು. ಮಹಾಂತಪ್ಪಗಳೂ ಹಾಗೆಯೇ ಏಕೈಕ ದೃಷ್ಟಿಯಿಂದ ಮೃತ್ಯುಂಜಯ ಶ್ರೀಗಳನ್ನು ನೋಡತೊಡಗಿದರು. ಉಭಯ ದೃಷ್ಟಿಗಳು ಒಂದಾದವು. ಅನಿಮಿಷ ದೇವನ ಪ್ರಾಣಕಳೆ ಪ್ರಭುದೇವರನ್ನು ಪ್ರವೇಶಿಸಿದಂತೆ ಶ್ರೀಮೃತ್ಯುಂಜಯಪ್ಪಗಳ ಪ್ರಾಣಜ್ಯೋತಿ ಮಹಾಂತ ಸ್ವಾಮಿಗಳ ದೇಹವನ್ನು ಪ್ರವೇಶಿಸಿತು. ಲಿಂಗದಿಂದ ಉದಿಸಿಬಂದ ಮೃತ್ಯುಂಜಯಸ್ವಾಮಿಗಳು ಲಿಂಗೈಕ್ಯರಾದರು.

ಐದು ನಿಮಿಷದಲ್ಲಿ ಸುದ್ದಿ ನಾಡಿನ ತುಂಬ ಪಸರಿಸಿತು. ರೇಡಿಯೋ ವಾರ್ತೆಯಲ್ಲಿ ಬಿತ್ತರಿಸಲಾಯಿತು. ಸಾವರಿಸಿಕೊಂಡು ನಾನು ಮಠಕ್ಕೆ ಹೋದರೆ ನನಗಿಂತ ಮೊದಲು ಧಾರವಾಡದ ಬುರ್ಲಿ ಬಿಂದು ಮಾಧವರಾಯರು ಬಂದು ಶ್ರೀಗಳವರ ಅಂತ್ಯದರ್ಶನ ಪಡೆದು, ನಮ್ಮ ನಾಡಿನ ಜ್ಯೋತಿ ಮುಳುಗಿತೆಂದು ಕಣ್ಣೀರಿಡುತ್ತ ನಿಂತಿದ್ದರು. ತಾಯಿಯನ್ನು ಕಳೆದುಕೊಂಡ ಮಗುವಿನಂತೆ ಮಹಾಂತಪ್ಪಗಳು ಕಣ್ಣೀರು ಸುರಿಸುತ್ತಿದ್ದರು. 'ಕಾವಿ ಬಟ್ಟೆಗೆ ಗೌರವ ತಂದ ಪುಣ್ಯಪುರುಷ ಮುಳುಗಿದ' ಎಂದು ಅರಭಾವಿಯ ಅಜ್ಜನವರು ಚಿಂತಿಸಿದರು. ಅಂತ್ಯಯಾತ್ರೆಗಾಗಿ ಲಕ್ಷಾಂತರ ಜನ ಬಂದರು. ಶಿವಯೋಗಿಗಳ ಧ್ಯಾನದಲ್ಲಿ ಲೀನರಾದ

ಶ್ರೀ ಮೃತ್ಯುಂಜಯಪ್ಪಗಳ ಕೊನೆಯ ದರ್ಶನ ಪಡೆದರು. ಯುಗಕ್ಕೊಮ್ಮೆ ಮೂಡುವ ಜ್ಯೋತಿ ಮಾಯವಾಯಿತೆಂದು ಮರುಗಿದರು. ತಾಯಿಯನ್ನು ಕಳೆದುಕೊಂಡ ಪರದೇಶಿ ಮಗುವಿನಂತೆ ನಾಡಿಗೆ ನಾಡೇ ಕಣ್ಣೀರಿಟ್ಟಿತು.

ಒಂದು ದೃಷ್ಟಿಯಿಂದ ಆ ಜ್ಯೋತಿ ನಂದಲಿಲ್ಲ. ಅದು ಮಹಾಂತಪ್ಪಗಳಲ್ಲಿ ಜ್ವಲಿಸಿತು, ಪ್ರಜ್ವಲಿಸಿತು. ಅವರಿದ್ದಾಗ ನಡೆಯುವ ಎಲ್ಲ ಕೆಲಸಗಳೂ ನಡೆದುದಲ್ಲದೆ, ಅವು ದ್ವಿಗುಣ ತ್ರಿಗುಣಗೊಂಡವು. ಮಹಾಂತಸ್ವಾಮಿಗಳು ಮುಟ್ಟಿದುದೆಲ್ಲ ಚಿನ್ನವಾಗತೊಡಗಿತು. ಶ್ರೀ ಮಠದ ಆವರಣದಲ್ಲಿಯೇ ಮೃತ್ಯುಂಜಯ ಮಹಾಸ್ವಾಮಿಗಳ ಹೆಸರಿನಲ್ಲಿ ಬಾಲವಾಡಿ, ಪ್ರಾಥಮಿಕಶಾಲೆ, ಮಾಧ್ಯಮಿಕಶಾಲೆ, ಕಾಲೇಜು—ಇವೆಲ್ಲವುಗಳನ್ನೂ ಮಹಾಂತಸ್ವಾಮಿಗಳು ಪ್ರಾರಂಭಿಸಿದರು. ಪ್ರಸಾದನಿಲಯದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಪ್ರಕಟನೆಗಳು ಮುಂದುವರಿದವು. ಕವಿ–ಗಮಕಿ–ವಾದಿ–ವಾಗ್ಮಿಗಳಿಗೆ ಪ್ರೋತ್ಸಾಹ–ಆಶೀರ್ವಾದ ಮುಂದುವರಿದವು. ಶಿವಯೋಗಿಗಳ ಗದ್ದುಗೆಯ ಸಾನ್ನಿಧ್ಯದಲ್ಲಿಯೇ ಶ್ರೀ ಮೃತ್ಯುಂಜಯಪ್ಪಗಳ ಮಂಗಲಮೂರ್ತಿ ಪ್ರತಿಷ್ಠಾಪನಗೊಂಡಿತು. ಶಿವಯೋಗಿಗಳ ವಿಗ್ರಹಕ್ಕೆ ಇರುವ ಕಳೆಯೇ ಮೃತ್ಯುಂಜಯಸ್ವಾಮಿಗಳ ವಿಗ್ರಹಕ್ಕೂ ಬಂದಿತು. ಜಯಪುರದ ಶಿಲೆಗಳಲ್ಲಿ ನಿರ್ಮಿಸಿದ ಆ ಮಂಟಪ ಈ ಯುಗದ ಆದರ್ಶ ಕಲಾಕೃತಿಯೆಂಬಂತೆ ರೂಪಗೊಂಡಿತು. ನಿತ್ಯ ಸಾವಿರಾರು ಜನರು ಅಲ್ಲಿಗೆ ಬಂದು ಮನಶ್ಶಾಂತಿ ಪಡೆಯುತ್ತಾರೆ. ಅದು ನಿತ್ಯ ಯಾತ್ರಾಸ್ಥಳವಾಗಿದೆ.

ಒಂದು ನಾಡಿನ ಚರಿತ್ರೆಯಲ್ಲಿ ಪ್ರಭಾವಶಾಲಿ ವ್ಯಕ್ತಿಯೊಬ್ಬರು ಬಂದು ಹೋದರೆ, ಅದರ ಹಿಂದೆ ಬರುವವರು ಅಷ್ಟೇ ದುರ್ಬಲರಾಗಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. ಶ್ರೀ ಮುರುಘಾಮಠದ ಚರಿತ್ರೆ ಈ ಸಾಮಾನ್ಯನಿಯಮಕ್ಕೆ ಒಳಪಟ್ಟಿಲ್ಲ. ಅಥಣಿ ಶಿವಯೋಗಿಗಳ ದಿವ್ಯ ಪರಂಪರೆಯನ್ನು ಮೃತ್ಯುಂಜಯಮಹಾಸ್ವಾಮಿಗಳು ಸಾಕಾರಗೊಳಿಸಿದರು. ರಾಮಕೃಷ್ಣ ಪರಮಹಂಸರ ವಿಚಾರಗಳನ್ನು ಸ್ವಾಮಿವಿವೇಕಾನಂದರು ಕೃತಿಗಿಳಿಸಿ, ನಾಡನ್ನು ಉದ್ಧರಿಸಿದಂತೆ ಶಿವಯೋಗಿಗಳ ವಿಚಾರಗಳನ್ನು ಮೃತ್ಯುಂಜಯಸ್ವಾಮಿಗಳು ಸಾಕಾರಗೊಳಿಸಿ ಲೋಕೋದ್ಧಾರ ಮಾಡಿದರು. ಮೃತ್ಯುಂಜಯ ಮಹಾಸ್ವಾಮಿಗಳ ವಿಚಾರ ಪ್ರಣಾಲಿಯನ್ನು ಮಹಾಂತ ಸ್ವಾಮಿಗಳು ಚಾಚೂತಪ್ಪದೆ ಮುಂದುವರಿಸಿದರಲ್ಲದೆ, ಅದನ್ನು ಹೆಚ್ಚು

ಅಭಿವೃದ್ಧಿಪಡಿಸಿದರು. ಇಂದು ಶ್ರೀಮಠಕ್ಕೆ ಬರು–ಹೋಗುವ ಜನರ ಸಂಖ್ಯೆ ಅತ್ಯಧಿಕವಾಗುತ್ತ ನಡೆದಿದೆ. ಕಾಶಿ, ರಾಮೇಶ್ವರಕ್ಕೆ ಹೋದರೆ ಬರುವಷ್ಟು ಪುಣ್ಯ ಶ್ರೀ ಮುರುಘಾಮಠಕ್ಕೆ ಬಂದರೆ ಪ್ರಾಪ್ತವಾಗುವುದೆಂಬ ಭಾವನೆ ಜನರಲ್ಲಿ ಬೇರೂರಿದೆ. ಇಂಥ ಕಠಿಣ ಕಾಲದಲ್ಲಿಯೂ ಪ್ರತಿನಿತ್ಯ ಶ್ರೀಮಠದಲ್ಲಿ ಸಾವಿರಾರು ಜನರಿಗೆ ಪ್ರಸಾದವಿತರಣೆಯಾಗುತ್ತ ನಡೆದಿದೆ. ಬಿಡುವಿಲ್ಲದಂತೆ ದರ್ಶನಕ್ಕಾಗಿ ಭಕ್ತರ ಪ್ರವಾಹ ಮಠದತ್ತ ಸಾಗುತ್ತಲೇ ಇರುತ್ತವೆ. ಎಲ್ಲವನ್ನೂ ನಿರ್ಧರಿಸುವ ಶಕ್ತಿಯನ್ನು ಅಥಣಿ ಶಿವಯೋಗಿಗಳು, ಮೃತ್ಯುಂಜಯಮಹಾಸ್ವಾಮಿಗಳು ಮಹಾಂತಪ್ಪಗಳಿಗೆ ದಯಪಾಲಿಸಿದ್ದಾರೆ. ಅದೆಲ್ಲವನ್ನೂ ಒಳಕೊಂಡು ಮಹಾಂತಅಪ್ಪಗಳು ತುಂಬಿದ ಕೊಡದಂತೆ ಗಂಭೀರವಾಗಿದ್ದು 'ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ' ಎಂಬ ಸೂತ್ರಕ್ಕೆ ವ್ಯಾಖ್ಯಾನವಾಗಿ ನಿಂತಿದ್ದಾರೆ. ಮೃತ್ಯುಂಜಯಪ್ಪಗಳ ಕನಸು ನನಸಾಗುತ್ತ ನಡೆದಿದೆ.

## ವ್ಯ ಕ್ತಿ ತ್ವ

ಮೃತ್ಯುಂಜಯಪ್ಪಗಳ ವ್ಯಕ್ತಿತ್ವದಲ್ಲಿ ಒಂದು ವಿಶೇಷತೆ ಕಂಡುಬರುತ್ತಿದ್ದಿತು. ಹತ್ತಿರ ಯಾರು ಬಂದರೂ ಅವರನ್ನು ಅಪ್ಪಗಳು ಅತ್ಯಂತ ಅಂತಃಕರಣಪೂರ್ವಕ ನೋಡಿಕೊಳ್ಳುತ್ತಿದ್ದರು. ಆ ವಾತ್ಸಲ್ಯ, ಅಂತಃಕರಣದಲ್ಲಿ ಯಾವ ಕೊರತೆಯೂ ಕಂಡುಬರುತ್ತಿರಲಿಲ್ಲ. ಅವರನ್ನು ಕಂಡವರೆಲ್ಲ 'ಮೃತ್ಯುಂಜಯಸ್ವಾಮಿಗಳ ಕೃಪಾಕಟಾಕ್ಷಕ್ಕೆ ಪಾತ್ರನಾಗಿದ್ದೇನೆ ; ಅವರು ನನ್ನನ್ನು ಅಂತಃಕರಣಪೂರ್ವಕ ಆಶೀರ್ವದಿಸಿದ್ದಾರೆ' ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಿದ್ದರು.

ಮೃತ್ಯುಂಜಯಸ್ವಾಮಿಗಳು ಈ ಜಗತ್ತನ್ನೂ ಜನರನ್ನೂ ಖಂಡದೃಷ್ಟಿಯಿಂದ ಕಾಣಲಿಲ್ಲ, ಅಖಂಡವಾಗಿಯೇ ನೋಡಿದರು. ಬಂದವರನ್ನು ಶಿವಯೋಗಿಗಳೆಂದೇ ಕಾಣುತ್ತಿದ್ದರು. ಶಿವಯೋಗಿಗಳ ವಿಷಯವಾಗಿ ಅವರಿಗಿದ್ದ ಭಕ್ತಿ, ಇಲ್ಲಿ ಅಖಂಡವಾತ್ಸಲ್ಯವಾಗಿ ಸಾನ್ನಿಧ್ಯಕ್ಕೆ ಬಂದ ಪ್ರತಿಯೊಬ್ಬ ವ್ಯಕ್ತಿಯ ಮೇಲೆ ಹರಿಯುತ್ತಿದ್ದಿತು. ಬುದ್ಧ, ಬಸವಣ್ಣನವರ ಸ್ಥಿತಿಯೂ ಹೀಗೆಯೇ ಆಗಿರಬೇಕು. ಜನತೆಯನ್ನು

ಅವರು ಅಖಂಡವಾಗಿ ಪ್ರೀತಿಸಿದರು. ಜನತೆ ಅವರಿಗೆ ಅಖಂಡವಾಗಿ ಅರ್ಪಿತಗೊಂಡರು.

ಭಕ್ತಿಯ ಲೋಹಚುಂಬಕ ಶಕ್ತಿ ಅವರಲ್ಲಿತ್ತು. ಪ್ರಸನ್ನವದನ, ಭಕ್ತಿಯ ರಾಜತೇಜಗಳಿಂದ ಕೂಡಿದ ಕಣ್ಣುಗಳು, ಕೆಚ್ಚಿನಿಂದ ಕೂಡಿದ ವಾಣಿ ಇವು ಆ ವ್ಯಕ್ತಿತ್ವದ ಬಾಹ್ಯ ನೋಟಗಳು. ಅಂತರಂಗ ಅಖಂಡ ಭಕ್ತಿಜ್ಞಾನದ ಬೀಡಾಗಿದ್ದಿತು. ಈ ಬಾಹ್ಯನೋಟ ಒಳಗಿನ ಸತ್ವವನ್ನು ಸದಾ ಕನ್ನಡಿಸುತ್ತಿತ್ತು.

## ಕಂಠಶ್ರೀ

ಮೃತ್ಯುಂಜಯಸ್ವಾಮಿಗಳಿಗೆ ದೈವದತ್ತವಾಗಿ ಬಂದುದು ಅವರ ಕಂಠಶ್ರೀ. ಪೂರ್ವಾಶ್ರಯದ ತಂದೆಯವರಾದ ಕಾಂತೆಯ್ಯನವರಿಂದ ಸಂಗೀತ ಅವರಿಗೆ ಬಳುವಳಿಯಾಗಿ ಬಂದಿದ್ದಿತು. ಪ್ರಾರಂಭದಲ್ಲಿ ಪ್ರಸಾದನಿಲಯ ಪ್ರಾರಂಭಿಸಿದಾಗ ಬಗಲಿಗೆ ಜೋಳಿಗೆ ಹಾಕಿಕೊಂಡು ಬರಿಗಾಲಿನಿಂದ ಸಂಚರಿಸುತ್ತ ಊರೂರಿಗೆ, ಮನೆಮನೆಗೆ ಭಿಕ್ಷೆಗೆ ಹೋದಾಗ ಭಾವಪರವಶರಾಗಿ ಶರಣರ ಹಾಡು ಹಾಡಿದರೆ ಜನ ಅದನ್ನು ಕೇಳುತ್ತ ಮಂತ್ರಮುಗ್ಧರಾಗಿ ನಿಂತು ಬಿಡುತ್ತಿದ್ದರು. ಮುಂದೆ ಶ್ರೀ ಮುರುಘಾಮಠದ ಕಾರ್ಯಕ್ರಮಗಳಲ್ಲಿಯೂ ಹೀಗೆಯೇ ಅಲ್ಲಿ ನಿಚ್ಚ ನಿಚ್ಚ ಶಿವರಾತ್ರಿ ಕಾರ್ಯಕ್ರಮ. ಕೊನೆಗೆ ಮೃತ್ಯುಂಜಯಸ್ವಾಮಿಗಳು ಮಂಗಲ ಮಾಡುತ್ತ 'ಕಾಡಲೇಕೆ ನರರುಗಳನು ಬೇಡಿ ಬಳಲಲೇಕೆ ಮನವೆ' ಎಂದು ಹಾಡತೊಡಗಿದರೆ ನಿರಪೇಕ್ಷ ವ್ಯಕ್ತಿತ್ವ ಸಭೆಯ ಮುಂದೆ ಬಂದು ನಿಂತಂತಾಗುತ್ತಿತ್ತು. ಮೃತ್ಯುಂಜಯಸ್ವಾಮಿಗಳ ವಾಣಿವೈಖರಿ, ಕಲಾತಾದಾತ್ಮ್ಯ ಅಂತಹದು. ಅವರ ತಾಳ–ರಾಗ–ಲಯಗಳ ಜ್ಞಾನ ಅನುಪಮವಾಗಿದ್ದಿತು. ಅವರು ಸಂಗೀತವನ್ನು ಜೀವಿಸಿದರು. ಅದನ್ನೇ ಪರಮಾತ್ಮನಿಗೆ ಅರ್ಪಿಸಿದರು. ಮತ್ತೆ ಸಂಗೀತ ಕಲಾವಿದರನ್ನು ಪ್ರೀತಿಸಿದರು, ಆಶೀರ್ವದಿಸಿದರು, ಗೌರವಿಸಿದರು. ಮಲ್ಲಿಕಾರ್ಜುನ ಮನಸೂರ, ಬಸವರಾಜ ರಾಜಗುರು, ಹುಕ್ಕೇರಿ ಬಾಳಪ್ಪ, ಜೋಳದರಾಶಿ ದೊಡ್ಡನಗೌಡ ಮುಂತಾದ ಕಲಾವಿದರು ಮೃತ್ಯುಂಜಯಪ್ಪಗಳ ಭಕ್ತಿಯ ಬಳಗದಲ್ಲಿ ಮಾರ್ಪುಗೊಂಡವರು. ಈ ಅಪ್ರತಿಮ ಕಲಾವಿದರು,

ಕಲಾವಿದರಿಗೆ ಸಹಜವಾದ ಚಾಂಚಲ್ಯದಲ್ಲಿ ಎಲ್ಲಿಯೋ ತೂರಿ ಹೋಗಬಹುದಿತ್ತು. ಆದರೆ ಮೃತ್ಯುಂಜಯಸ್ವಾಮಿಗಳ ಪರಿಶುದ್ಧ ಪ್ರೇಮ ಇಂಥ ಅನೇಕ ಕಲಾವಿದರನ್ನೂ ಸಾಹಿತಿಗಳನ್ನೂ ರಾಜಕೀಯ ವ್ಯಕ್ತಿಗಳನ್ನೂ ಕಾಪಾಡಿತು. ಅವರ ವ್ಯಕ್ತಿತ್ವದ ಮೇಲೆ ತನ್ನ ಪ್ರಭಾವ ಬೀರಿತು. ಜೋಳದರಾಶಿ ದೊಡ್ಡನಗೌಡರು 'ನಾನು ನಾಟಕವಾಡುತ್ತ ಎಲ್ಲಿಗೋ ಹೋಗಬೇಕಾದವನು ನನ್ನನ್ನು ತಂದು ಶೂನ್ಯಸಂಪಾದನೆಯ ಪ್ರವಚನಕ್ಕೆ ಅಣಿಮಾಡಿದುದು ಮೃತ್ಯುಂಜಯಪ್ಪಗಳ ಪವಾಡ'ವೆಂದು ಅನೇಕಸಲ ಹೇಳುತ್ತಾರೆ. ಮಲ್ಲಿಕಾರ್ಜುನ ಮನಸೂರರ ಮಾತೂ ಹೀಗೆಯೇ. ಒಮ್ಮೆ ದೃಷ್ಟಿಗೆ ಬಿದ್ದರೆ ಸಾಕು, ಮೃತ್ಯುಂಜಯಪ್ಪಗಳು ಎಂದಿಗೂ ಅವರನ್ನು ಬಿಟ್ಟವರಲ್ಲ.

ಮೃತ್ಯುಂಜಯಸ್ವಾಮಿಗಳಿಗೆ ಲೌಕಿಕವೆಲ್ಲ ಪಾರಮಾರ್ಥಿಕವಾಗಿ ಪರಿಣಮಿಸಿತು. ಶಿವಾನುಭವ ಅವರ ವ್ಯಕ್ತಿತ್ವದಲ್ಲಿ ಅಷ್ಟು ಹಾಸುಹೊಕ್ಕಾಗಿ ವ್ಯಾಪಿಸಿದ್ದಿತು. ಗದುಗಿನ ತೋಂಟದಾರ್ಯಮಠವನ್ನು ಬಿಟ್ಟು, ನಿದ್ರೆ–ನೀರಡಿಕೆಯಿಲ್ಲದೆ ಕಷ್ಟಪಟ್ಟು ಸಂಚರಿಸಿ, ಸದ್ಗುರುವನ್ನು ಕಂಡುಕೊಂಡರು. ಅದು ಶ್ರೀಗಳ ಪೂರ್ವಜನ್ಮದ ಪುಣ್ಯ. ಯಾರ ಕಡೆಯಿಂದಲೂ ಒಂದುದಿನವೂ ಸೇವೆ ಮಾಡಿಸಿಕೊಳ್ಳದ ಗುರು ಅಥಣಿ ಶಿವಯೋಗಿಗಳು ಮೃತ್ಯುಂಜಯಪ್ಪಗಳ ಸೇವಾಭಾವಕ್ಕೆ ಮೆಚ್ಚಿ ತಮ್ಮ ಕೆಲಸಗಳನ್ನು ಅವರಿಗೆ ಒಪ್ಪಿಸತೊಡಗಿದುದು ಪವಾಡವೇ ಸರಿ. ಅಷ್ಟು ಮಟ್ಟಿಗೆ ಮೃತ್ಯುಂಜಯಸ್ವಾಮಿಗಳು ಅವರ ಮನಸ್ಸನ್ನು ಗೆದ್ದುಕೊಂಡಿದ್ದರು. ಗುರುಮುಖಿಯಾಗಿದ್ದ ಅವರ ಈ 'ಸೇವೆ' ಲಿಂಗಮುಖಿಯಾಗುವಲ್ಲಿ 'ಪೂಜೆ'ಯಾಗಿ ಜಂಗಮುಖಿಯಾಗುವಲ್ಲಿ 'ದಾಸೋಹ'ವಾಗಿ ಅರಳಿತು. ಇದರಿಂದಾಗಿ ಮೃತ್ಯುಂಜಯಸ್ವಾಮಿಗಳ ವ್ಯಕ್ತಿತ್ವವನ್ನು ಶಿವಾನುಭವ ಸಂಪೂರ್ಣ ವ್ಯಾಪಿಸಿತು. ಅವರು ನಡೆದರೆ ನುಡಿದರೆ, ನೋಡಿದರೆ ಶಿವಾನುಭವವೇ ಸಾಕಾರವಾಗಿ ಕಾರ್ಯಮಾಡುವಂತೆ ತೋರುತ್ತಿತ್ತು.

## ಸಂಕಲ್ಪಸಿದ್ಧಿ

ಮೃತ್ಯುಂಜಯ ಸ್ವಾಮಿಗಳಿಗೆ ಸಂಕಲ್ಪ ಮತ್ತು ಕ್ರಿಯಾಸಿದ್ಧಿ ಇವು ಸಾಧನ–ಸಾಧ್ಯಗಳಾಗಿರಲಿಲ್ಲ. ಮಹಾತ್ಮರಿಗೆ ಕ್ರಿಯಾಸಿದ್ಧಿ ಸಂಕಲ್ಪದಲ್ಲಿಯೇ

ಸಾಧ್ಯವಾಗುತ್ತದೆ. ಆವುದೊಂದು ವಿಚಾರವನ್ನು ಸಂಕಲ್ಪಿಸಿ, ಅದರ ಆಗು–ಹೋಗುಗಳನ್ನು ವಿಚಾರಿಸಿ, ತೂಗಿನೋಡಿ ತಕ್ಕ ಉಪಾಯಗಳನ್ನು ಹುಡುಕಿ ಕಾಲಾಂತರದಲ್ಲಿ ಅವುಗಳನ್ನು ಕೃತಿಗಿಳಿಸುವ ಜಾಯಮಾನ ಮೃತ್ಯುಂಜಯ ಸ್ವಾಮಿಗಳದಲ್ಲ ; ಅವರಿಗೆ ಸಂಕಲ್ಪ ಸಿದ್ಧಿಗಳೆರಡೂ ಏಕಕಾಲಕ್ಕೇ ನಡೆಯತಕ್ಕವು. ವಿಚಾರ ಬಂದ ಕ್ಷಣದಲ್ಲಿಯೇ ಕಾರ್ಯ ಮಾಡುತ್ತಿದ್ದರು. ಅದು ಅವರ ವೈಶಿಷ್ಟ್ಯ. ಅಖಂಡಶಕ್ತಿ ಪಡೆದ ವ್ಯಕ್ತಿಗಳಿಗೆ ಮಾತ್ರ ಇದು ಸಾಧ್ಯ. ಕ್ರಿಯೆಯಲ್ಲಿ ಅನುಷ್ಠಾನಗೊಳಿಸಿದ ಜ್ಞಾನ, ಅಜ್ಞಾನ–ಬಂಧಕಾರಿ. ಜ್ಞಾನದಿಂದ ಪರಿಸ್ಫುಟಗೊಳ್ಳದ ಕ್ರಿಯೆ, ಕರ್ಮ–ಬಂಧಕಾರಿ. ಆದುದರಿಂದ ಎಲ್ಲಿ ಸಂಕಲ್ಪವು ನಿಶ್ಚಿತ ಜ್ಞಾನದಲ್ಲಿ ಮೂಡುತ್ತದೆಯೋ, ಆ ಜ್ಞಾನದಲ್ಲಿಯೇ ಕ್ರಿಯೆ ಅಡಗಿರುತ್ತದೆ. ಆದುದರಿಂದ ಮೃತ್ಯುಂಜಯಪ್ಪಗಳಲ್ಲಿ ಕ್ರಿಯೆ ಮಾಡಲು ಕಾಲವಿಲಂಬ ಇರಲೇ ಇಲ್ಲ. ಅವರಲ್ಲಿ ನಿರ್ಭರ ವಿಶ್ವಾಸವಿದ್ದಿತು. ಈ ವಿಶ್ವಾಸದ ಮೇಲೆ ಅವರ ಕಾರ್ಯಕಲಾಪ ನಡೆದುಹೋಗುತ್ತಿದ್ದವು.

## ತ್ರಿವಿಧ ದಾಸೋಹಮೂರ್ತಿ

ಮೃತ್ಯುಂಜಯಪ್ಪಗಳನ್ನು 'ತ್ರಿವಿಧ ದಾಸೋಹಮೂರ್ತಿ'ಗಳೆಂದು ಕರೆಯುತ್ತಿದ್ದರು. ತ್ರಿವಿಧ ದಾಸೋಹವೆಂದರೆ ಗುರು–ಲಿಂಗ–ಜಂಗಮಕ್ಕೆ ತ್ರಿಕರಣಪೂರ್ವಕವಾಗಿ ತನು–ಮನ–ಧನಗಳನ್ನು ಅರ್ಪಣ ಮಾಡಿಕೊಳ್ಳುವುದು. ಇದರಿಂದಾಗಿ ಗುರುವಿನಲ್ಲಿ ಉತ್ಪತ್ತಿ, ಲಿಂಗದಲ್ಲಿ ಸ್ಥಿತಿ, ಜಂಗಮದಲ್ಲಿ ಐಕ್ಯವೆಂಬುದು ಶ್ರೀಗಳವರ ಜೀವನಸೂತ್ರವಾಗಿದ್ದಿತು. ತನು ಗುರುವಿನ ಸೊತ್ತು. ಅವನಿಗಾಗಿ ಅದು ಸವೆಯಬೇಕು. ಆತ ತನುಗುಣಗಳೆಲ್ಲ ಅಳಿದು ಜ್ಞಾನ ತನುವುಳ್ಳವನಾಗುತ್ತಾನೆ. ಇದು ಗುರುವಿನಲ್ಲಿ ಉತ್ಪತ್ತಿ. ಅಪ್ಪಗಳು ಇಂಥ ಉತ್ಪತ್ತಿ ಸ್ವರೂಪವಾಗಿದ್ದರು. ತನು ತಮ್ಮದಾಗಿದ್ದರೆ, ಅದರ ಪ್ರೀತ್ಯರ್ಥ್ಯವಾಗಿ ವಿಷಯಸುಖಕ್ಕಾಗಿ ಎಳಸಬೇಕಲ್ಲವೆ ? ಗುರುವಿಗೆ ಅರ್ಪಣ ಮಾಡಿ ತಮ್ಮದೆಂಬ ತನುವೇ ಇಲ್ಲವೆಂದ ಮೇಲೆ ಅಲ್ಲಿ ಅಂಗ ಭೋಗದ ಮಾತು ಬರುವುದೇ ಇಲ್ಲ. ಇಂದ್ರಿಯ ವ್ಯಾಪಾರಗಳಲ್ಲಿ ಲಿಂಗವನ್ನು ಇರಿಸಿದ ಮೇಲೆ ಅವುಗಳ ಫಲವೆಲ್ಲ ಲಿಂಗಕ್ಕೆ ಸಲ್ಲುತ್ತದೆ. ಹೀಗಾಗಿ 'ಲಿಂಗದಲ್ಲಿ ಸ್ಥಿತಿ'

ಎಂಬುದಕ್ಕೆ ಅವರು ನಿದರ್ಶನವೆನಿಸಿದ್ದರು. ನಿತ್ಯವೂ ಕಾಯುವನ್ನು ಸಮಾಜ ಸೇವೆಯಲ್ಲಿ ತೊಡಗಿಸಿ ಅವರು 'ಜಂಗಮದಲ್ಲಿ ಐಕ್ಯ'ಸಿದ್ಧಿಯನ್ನೂ ಪಡೆದರು. ಅವರಿಗೆ ಇಡೀ ಸಮಾಜವೆಲ್ಲ ಜಂಗಮಸ್ವರೂಪವೇ. ಲೋಕಸಂಗ್ರಹಕಾರ್ಯಗಳೆಲ್ಲ ಜಂಗಮ ದಾಸೋಹವೆಂದೇ ಅವರು ಭಾವಿಸಿದ್ದರು. ಹೀಗೆ ನಾನೆಂಬ ಅಹಂಕಾರವನ್ನುಳಿದು ಗುರುಲಿಂಗ ಜಂಗಮಕ್ಕಾಗಿ ತಮ್ಮನ್ನು ತಾವು ಅರ್ಪಣೆ ಮಾಡಿಕೊಂಡುದರಿಂದ ಮೃತ್ಯುಂಜಯಮಹಾಸ್ವಾಮಿಗಳನ್ನು 'ತ್ರಿವಿಧ ದಾಸೋಹಮೂರ್ತಿ'ಗಳೆಂದು ಕರೆಯುವುದು.

ಈ ತ್ರಿವಿಧ ದಾಸೋಹಕ್ಕೆ ಸಂಕೇತವೆನಿಸಿದಂತೆ ಶ್ರೀಮಠದಲ್ಲಿ ಅನ್ನದಾಸೋಹ–ಜ್ಞಾನದಾಸೋಹ–ಕ್ರಿಯಾದಾಸೋಹ ನಿತ್ಯವೂ ನಡೆಯುತ್ತಿದ್ದವು. ಈ ತ್ರಿವಿಧ ದಾಸೋಹದಿಂದ ವೀರಶೈವಕ್ಕೆ ಪ್ರಮಾಣಪುರುಷರಾಗಿದ್ದರು—ಮೃತ್ಯುಂಜಯಮಹಾಸ್ವಾಮಿಗಳು. ಆದರಿಂದ ಆ ಪದ ಸಾರ್ಥಕವಾಯಿತು.

ಇಂತಹ ವ್ಯಕ್ತಿತ್ವದ ಮೂಲಕ ಎಲ್ಲರನ್ನೂ ಆಕರ್ಷಿಸುವ ಶಕ್ತಿ ಅವರಿಗಿದ್ದಿತು. ಮುರುಘಾಮಠಕ್ಕೆ ಬರುವ ಬಗೆಬಗೆಯ ವ್ಯಕ್ತಿಗಳು ಅವರ ಈ ಶಕ್ತಿಗೆ ಆಕರ್ಷಿತರಾಗಿದ್ದರೆಂಬುದು ಸ್ಪಷ್ಟವಾಗುತ್ತದೆ. ಡಾ॥ ಎಸ್. ಸಿ. ನಂದಿಮಠ, ಎಸ್. ಎಸ್. ಬಸವನಾಳರಂಥ ವಿದ್ವನ್ಮಣಿಗಳು, ಮಲ್ಲಿಕಾರ್ಜುನ ಮನಸೂರ, ಜೋಳದರಾಶಿಯವರಂಥ ಸಂಗೀತಜ್ಞರು, ವೈ. ನಾಗೇಶಶಾಸ್ತ್ರಿ, ನಾಗಭೂಷಣಶಾಸ್ತ್ರಿಗಳವರಂಥ ಪಂಡಿತರು, ಎಸ್. ನಿಜಲಿಂಗಪ್ಪ, ವೈ. ಮಹಾಬಳೇಶ್ವರಪ್ಪರಂಥ ರಾಜಕಾರಣಿಗಳು ಅವರ ಪ್ರಭಾವಲಯದಲ್ಲಿ ಸಿಲುಕಿ ದೈವೀಗುಣಗಳನ್ನು ಪಡೆದುದು ಸರ್ವಶ್ರುತ. ನಮ್ಮ ಜನರೇಕೆ, ವಿದೇಶದಿಂದ ಬಂದ ಅನೇಕರೂ ಇವರ ಪ್ರಭಾವಕ್ಕೆ ಒಳಗಾಗಿದ್ದುದು ಅತ್ಯಂತ ಸೋಜಿಗ. ೧೯೫೮ರಲ್ಲಿ ನಾನು ಅಮೇರಿಕೆಗೆ ಹೋದಾಗ ಡಾ॥ ಮೆಕಾರ್ಮಿಕ್ ಅವರ ಮನೆಗೆ ಹೋದೆ. ಅವರ ಮನೆಯ ಗೋಡೆಗಳ ಮೇಲೆ ಬೇರೆ ಯಾವ ಫೋಟೋ, ಚಿತ್ರ, ಅಲಂಕಾರವಿರದೆ ಶ್ರೀ ಮೃತ್ಯುಂಜಯಸ್ವಾಮಿಗಳ ವರ್ಣಚಿತ್ರ ಮಾತ್ರ ಕಾಣುತ್ತಿತ್ತು. ನಾನು ಆಶ್ಚರ್ಯಚಕಿತನಾದೆ. ಪಾಶ್ಚಾತ್ಯರಲ್ಲಿ ಪಾದ್ರಿಗಳನ್ನು ಬಿಟ್ಟರೆ ಮಿಕ್ಕವರೆಲ್ಲ ಹೆಚ್ಚುಕಡಿಮೆ ನಾಸ್ತಿಕರೇ. ಮೆಕಾರ್ಮಿಕರೂ ಅಂಥವರಲ್ಲೊಬ್ಬರು. ಆ ಫೋಟೋ ನೋಡಿ 'What is this bill ?' ಎಂದು ನಾನು ಕೇಳಿದಾಗ

'Yes, I cannot forget' ಎಂಬ ಉತ್ತರ ಬಂದಿತು. ಇದು ಅವರ ವ್ಯಕ್ತಿತ್ವದ ಪ್ರಭಾವ.

ಇನ್ನೊಮ್ಮೆ ಒಬ್ಬ ಅಮೇರಿಕೆಯ ಸ್ನೇಹಿತ, ಅವರ ಜಪಾನಿ ಪತ್ನಿ— ಇಬ್ಬರೂ ಒಂದು ಸಂಜೆ ಶ್ರೀಮಠಕ್ಕೆ ಬಂದರು. ಅವರು ಬೌದ್ಧಧರ್ಮದ ವಿದ್ಯಾರ್ಥಿಗಳು. ಅವರಿಬ್ಬರೂ ಬುದ್ಧನಲ್ಲಿ ಅಪಾರ ಭಕ್ತಿ ಇಟ್ಟುಕೊಂಡವರು. ಮೃತ್ಯುಂಜಯಮಹಾಸ್ವಾಮಿಗಳಿಗೆ ಜಾತಿ, ಮತ, ದೇಶ, ಕಾಲ, ಭಾಷೆ, ಭಾವಗಳ ಎಲ್ಲೆ ಕಟ್ಟುಗಳೇ ಇರಲಿಲ್ಲ. ಇವೆಲ್ಲವುಗಳಿಂದ ಅತೀತರಾದ ನಿಸ್ಸೀಮರವರು. ಈ ದಂಪತಿಗಳೆಡೆಗೆ ಅಪ್ಪಗಳು ಮುಗುಳ್ನಗೆ ಸೂಸಿದರು. ಅವರ ಯೋಗಕ್ಷೇಮ ವಿಚಾರಿಸಿದರು. ಫಲ, ಪುಷ್ಪ, ಗ್ರಂಥಗಳನ್ನು ಆಶೀರ್ವದಿಸಿದರು. ಅವರೂ ತಮ್ಮ ಸುಖದುಃಖ ಹೇಳಿಕೊಂಡರು. ತಿರುಗಿ ಹೋಗುವಾಗ ಆ ದಂಪತಿಗಳು 'We see Buddha in him' ಎಂದರು. ಹೀಗೆ ವೀರಶೈವರಿಗೆ ಬಸವನಾಗಿ ಗೋಚರಿಸುವ ಮಹಾಸ್ವಾಮಿಗಳು, ಇವರಿಗೆ ಬುದ್ಧನಾಗಿ ಕಂಡರು. ಮಗುದೊಬ್ಬರಿಗೆ ಕ್ರೈಸ್ತನಾಗಿಯೂ ಕಾಣಬಹುದು. ಈ ಮಹಾತ್ಮರ ಗುಣಗಳನ್ನೆಲ್ಲ ಮೃತ್ಯುಂಜಯ ಮಹಾಸ್ವಾಮಿಗಳು ತಮ್ಮಲ್ಲಿ ಅಳವಡಿಸಿಕೊಂಡಿದ್ದರು.

## ಶ್ರೀ ವಿಭೂತಿಗೆ ನಮೋ

ಮೃತ್ಯುಂಜಯಸ್ವಾಮಿಗಳ ದರ್ಶನಕ್ಕೆ ಬಂದು ಆಶೀರ್ವಾದ ಪಡೆದು, ಅವರಿಂದ ಪ್ರಭಾವಿತರಾದ ಮಹನೀಯರು ಅನೇಕ. ರಾಷ್ಟ್ರಪತಿ ಬಾಬುರಾಜೇಂದ್ರಪ್ರಸಾದರು ಸ್ವತಂತ್ರ ಭಾರತದ ಪ್ರಥಮ ಅಧ್ಯಕ್ಷರು. ಅವರು ಶ್ರೀ ಮುರುಘಾಮಠಕ್ಕೆ (೬–೯–೧೯೫೧) ಸಂದರ್ಶನವಿತ್ತು ಹೀಗೆ ಅಭಿಪ್ರಾಯವಿತ್ತಿರುವರು : "ಬೆಳಗಿನಿಂದ ಬಿಡುವಿಲ್ಲದ ಕಾರ್ಯಕ್ರಮಗಳಿಂದ ದಣಿದುಹೋದ ನನಗೆ ಈ ಮಠದ ಸಂದರ್ಶನ, ಸ್ವಾಮಿಗಳ ಆಶೀರ್ವಾದದಿಂದ ಆ ದಣಿವು ಹಿಂಗಿದಂತಾಗಿದೆ. ಮನಸ್ಸಿಗೆ ಶಾಂತಿ, ಸಮಾಧಾನ ಲಭಿಸಿವೆ. ಸುದೈವದಿಂದ ನಾನು ಈ ಮಠಕ್ಕೆ ಭೆಟ್ಟಿಯಿತ್ತೆನೆಂದು ನಂಬುತ್ತೇನೆ. ಸಮಾಜೋದ್ಧಾರ ಶೈಕ್ಷಣಿಕ ಕಾರ್ಯಗಳಿಗಾಗಿ ಈ ಮಠ ಅಪ್ರತಿಮ ಸೇವೆ ಸಲ್ಲಿಸುತ್ತಿರುವುದನ್ನು ಕಂಡು ನನಗೆ ಆನಂದವಾಗಿದೆ.

ನಮ್ಮ ಸಮಾಜ-ರಾಷ್ಟ್ರಗಳು ಮೃತ್ಯುಂಜಯ ಮಹಾಸ್ವಾಮಿಗಳ ಸೇವೆಯಿಂದ ಅಭಿವೃದ್ಧಿ ಹೊಂದಲೆಂದು ಆಶಿಸುತ್ತೇನೆ."

ಭಾರತೀಯ ರಾಷ್ಟ್ರೀಯ ಪ್ರಾಧ್ಯಾಪಕರೂ ಸಾಹಿತ್ಯ ಅಕಾಡೆಮಿ, ಏಷಿಯಾಟಿಕ್ ಸೊಸೈಟಿಯ ಅಧ್ಯಕ್ಷರೂ ಆದ ಡಾ. ಸುನೀತ ಕುಮಾರ ಚಟರ್ಜಿಯವರು ಹೀಗೆ ನುಡಿದಿರುವರು : "ಡಾ. ಆರ್. ಸಿ. ಹಿರೇಮಠರವರು ಕೃಪೆಯಿಟ್ಟು ನನ್ನನ್ನು ಈ ಮಠಕ್ಕೆ ಕರೆದುಕೊಂಡು ಬಂದರು. ಬಸವಣ್ಣನವರ ಆದರ್ಶಗಳೆಲ್ಲ ಇಲ್ಲಿ ಕೃತಿರೂಪಕ್ಕಿಳಿದಿರುವದನ್ನು ಕಂಡು ನನಗೆ ಸಂತೋಷವೆನಿಸಿದೆ. ವೀರಶೈವ ಸಿದ್ಧಾಂತ, ಕರ್ನಾಟಕವು ಭರತ ಖಂಡಕ್ಕೆ ಸಲ್ಲಿಸಿದ ವಿಶಿಷ್ಟಕಾಣಿಕೆ. ಈ ಮಠದ ಪ್ರಶಾಂತ ವಾತಾವರಣ ಕಂಡು ನನಗೆ ಪರಮಾನಂದವಾಗಿದೆ."

ಮದ್ರಾಸ ವಿಶ್ವವಿದ್ಯಾಲಯಕ್ಕೆ 27 ವರ್ಷಗಳ ವರೆಗೆ ಕುಲಪತಿಗಳಾಗಿದ್ದ ಎ. ಲಕ್ಷ್ಮಣಸ್ವಾಮಿ ಮುದಲಿಯಾರವರು ಈ ಮಠಕ್ಕೆ ದರ್ಶನವಿತ್ತು "ಶ್ರೀಗಳವರಿಗೆ ಭಕ್ತಿಭಾವವನ್ನರ್ಪಿಸುವ ಪ್ರಸಂಗ ನನಗೆ ಪ್ರಾಪ್ತವಾದುದು ಒಂದು ಯೋಗಾಯೋಗ. ಇಲ್ಲಿ ನಡೆದಿರುವ ಕೆಲಸ ಎಲ್ಲರಲ್ಲಿಯೂ ಉತ್ಸಾಹವನ್ನುಂಟುಮಾಡುವಂಥದು. ವಿದ್ಯಾರ್ಥಿಗಳಿಗೆ ಈ ಪ್ರಶಾಂತ ವಾತಾವರಣದಲ್ಲಿ ಪ್ರಸನ್ನತೆ ಪ್ರಾಪ್ತವಾಗುತ್ತಿದೆ" ಎಂದು ನುಡಿದರು. ಇವರ ಸೋದರರಾದ ರಾಮಸ್ವಾಮಿ ಮುದಲಿಯಾರರೂ ಹೀಗೆ ಅಭಿಪ್ರಾಯವಿತ್ತಿರುವರು : "ಈ ಮಠದ ಶ್ರೀಗಳವರಿಗೆ ನನ್ನ ಪ್ರಣಾಮಗಳನ್ನರ್ಪಿಸುತ್ತಿದ್ದೇನೆ. ಇವರ ಪ್ರಭಾವ ನಾಡಿನ ಸುತ್ತೆಲ್ಲ ಪಸರಿಸಿದುದರಿಂದಲೇ ಇವರು ಕೈಕೊಂಡ ಶೈಕ್ಷಣಿಕ-ಸಾಮಾಜಿಕ ಕಾರ್ಯಗಳಿಗೆ ಬೇಕಾದ ಧನಧಾನ್ಯ ತಾವಾಗಿಯೇ ಹರಿದು ಬರುತ್ತಿವೆ."

ದಿಲ್ಲಿ ವಿಶ್ವವಿದ್ಯಾಲಯದ ಕುಲಪತಿಗಳೂ ಅರ್ಥಶಾಸ್ತ್ರಜ್ಞರೂ ಆದ ಶ್ರೀ ಸಿ. ಡಿ. ದೇಶಮುಖರವರು ಈ ಮಠಕ್ಕೆ ದರ್ಶನವಿತ್ತುದು ತಮ್ಮ ಜೀವನದ ಒಂದು ಭಾಗ್ಯವಿಶೇಷವೆಂದು ಭಾವಿಸಿದ್ದಾರೆ. "ಇದೊಂದು ಅಪೂರ್ವ ಸಂಸ್ಥೆ. ಇಲ್ಲಿ ದೈವೀಶಕ್ತಿ ಯುವಕರ ಮನಸ್ಸನ್ನು ತಿದ್ದಿ ತೀಡುತ್ತಿದೆ" ಎಂಬ ಅಭಿಪ್ರಾಯ ಅವರದಾಗಿದೆ.

"ಮೃತ್ಯುಂಜಯಮಹಾಸ್ವಾಮಿಗಳು ಈ ಲೋಕದಲ್ಲಿರುವ ಒಳಿತು, ಔದಾರ್ಯವೆಂಬೆಲ್ಲ ಗುಣಗಳ ಸಾಕಾರಮೂರ್ತಿಗಳಾಗಿದ್ದಾರೆ. ತ್ಯಾಗ,

ಸಮಾಜಸೇವೆಗಳಿಗೆ ಶ್ರೀ ಸ್ವಾಮಿಗಳು ಆದರ್ಶಪ್ರಾಯವಾಗಿದ್ದಾರೆ. ಅವರು ನಮಗೆಲ್ಲ ಒಂದು ಆದರ್ಶವನ್ನು ಇಟ್ಟಿದ್ದಾರೆ. ನಾವು ಅದರಂತೆ ನಡೆಯಬೇಕು. ಈ ಮಠದಲ್ಲಿ ದೈವೀಭಾವದ ನೈಜ ಅಸ್ತಿತ್ವ ಕಾಣುತ್ತೇವೆ. ಇಲ್ಲಿ ಬಸವಣ್ಣನ ಆದರ್ಶಗಳು ಸಾಕಾರಗೊಂಡಿವೆ" ಎಂದು ಲಂಡನ್ ಬಿ ಬಿ ಸಿ ಯ ಈ. ಎಚ್. ರಾಬರ್ಟಸನ್‌ರು ನುಡಿದಿರುವರು. "ಮೃತ್ಯುಂಜಯಮಹಾಸ್ವಾಮಿಗಳ ಸಂದೇಶ ಇಂದು ಅಮೇರಿಕಕ್ಕೆ ತಪ್ಪದೆ ಅನ್ವಯವಾಗುವಂತಿದೆ" ಎಂದು ವಿಲಿಯಂ. ಎಂ. ಹೆಬಾರ್ಡ ಎಂಬ ಅಮೇರಿಕೆಯ ವಿದ್ವಾಂಸರು ನುಡಿದಿರುವರು. "ಈ ಸಂಸ್ಥೆ ಗ್ರಾಮೀಣಭಾಗದಿಂದ ಬಂದ ಬಡಜನರಿಗೆ ದೊಡ್ಡ ಸಹಾಯ ಸಲ್ಲಿಸುತ್ತಿದೆ. ಇಂಥ ಸಂಸ್ಥೆಗಳು ತಮ್ಮ ನಾಡಿಗೆ ಭೂಷಣಪ್ರದವಾಗಿವೆ' ಎಂದು ಟಿ. ಎಂ. ಎ. ಪೈ ಅಭಿಪ್ರಾಯಪಟ್ಟಿರುವರು.

"ಈ ಮಠಕ್ಕೆ ದರ್ಶನವಿತ್ತು ಶ್ರೀಗಳಿಂದ ಆಶೀರ್ವಾದ ಪಡೆಯುವ ಭಾಗ್ಯ ನನಗೆ ಪ್ರಾಪ್ತವಾಗಿದೆ. ಅವರ ದೈವೀಶಕ್ತಿ ನನಗೆ ಭಕ್ತಿಯ ಪ್ರೇರಣೆಯನ್ನಿತ್ತಿದೆ" ಎಂದು ಹಿಂದಿನ ಮುಖ್ಯಮಂತ್ರಿ ದೇವರಾಜ ಅರಸು ಅವರು ನುಡಿದಿದ್ದಾರೆ.

ಕನ್ನಡ ನಾಡಗೀತೆಯನ್ನಿತ್ತ ಹುಯಿಲಗೋಳ ನಾರಾಯಣರಾಯರು "ಈ ಹೊತ್ತು ಶ್ರೀ ಮುರುಘಾಮಠವನ್ನು ಸಂದರ್ಶಿಸಿದೆನು. ಶ್ರೀ ಶಿವಯೋಗಿಗಳ ಮೂರ್ತಿಯನ್ನು ಕಣ್ಣಾರೆ ಕಂಡು ನನ್ನಲ್ಲಿ ಭಕ್ತಿ ಉದ್ರಿಕ್ತವಾಗಿದೆ. ಈ ಆಶ್ರಮದ ದರ್ಶನದಿಂದ ನಾನು ಧನ್ಯನಾಗಿರುವೆ. ಮೇಲಿಂದ ಮೇಲೆ ಈ ಮಠದ ಆಶ್ರಮ ನೋಡುವ ಭಾಗ್ಯ ನನಗೆ ಬರಲಿಯೆಂದು ಪ್ರಾರ್ಥಿಸುವೆ" ಎಂದು ಬರೆದಿರುವರು.

ಶ್ರೀ ರಂಗನಾಥ ದಿವಾಕರ ಅವರು ಈ ಶ್ರೀಮಠಕ್ಕೆ ೧೯-೯-೧೯೬೫ ರಂದು ಭೆಟ್ಟಿಯಿತ್ತು ಅಭಿಪ್ರಾಯವಿತ್ತಿರುವುದು ಹೀಗೆ : "ಈ ಮಹಾಮಠಕ್ಕೆ ಭೆಟ್ಟಿಯಿತ್ತು ಅದೆಷ್ಟೋ ವರ್ಷಗಳಾಗಿ ಹೋದವು. ಮತ್ತೆ ಈಗ ಬಂದಾಗ ಅದರ ಪಾವಿತ್ರ್ಯ, ಕಾರ್ಯಗೌರವ ವಿಶೇಷವಾಗಿ ಬೆಳೆದುದನ್ನು ನೋಡಿ ಮನಸ್ಸಿಗೆ ಸಾತ್ವಿಕ ಸಂತೋಷ ಉಂಟಾಯಿತು. ಶ್ರೀ ಸ್ವಾಮಿಗಳು ಹಿಂದಿನ ಪರಂಪರೆಯನ್ನು ನಡೆಸುವರಲ್ಲದೆ ಅದಕ್ಕೆ ಹೊಸ ಕಳೆಯನ್ನೂ ಕಟ್ಟಿದ್ದಾರೆ. ಅವರು ಮಾಡುವ ವಿದ್ಯಾದಾನ ವಿದ್ಯಾರ್ಥಿಗಳಲ್ಲಿ ಆತ್ಮತೇಜಸ್ಸನ್ನುಂಟು

ಮಾಡಲಿ, ಆ ತೇಜಸ್ಸು ದೇಶದ ತುಂಬ ಹಬ್ಬಲಿ. ಅದರಿಂದ ಈ ದೇಶದ ಹಾಗೂ ಜಗತ್ತಿನ ವಿಕಾಸ-ಉದ್ಧಾರಗಳು ಸಾಧಿಸಲಿ ಎಂದು ಹಾರೈಸುವೆ."

ದಿನಾಂಕ : ೫-೭-೧೯೭೮ರಂದು ದೊಡ್ಡಮೋಟಿ ಅಂದಾನೆಪ್ಪನವರು ಹೀಗೆ ತಮ್ಮ ಭಕ್ತಿಯನ್ನು ವ್ಯಕ್ತಪಡಿಸಿರುವರು : "ಶ್ರೀ ಮುರುಘಾಮಠದ ಸತ್ಕೀರ್ತಿಯು ಸಕಲರ ಮನವನ್ನೂ ಸೆಳೆದಿದೆ. ಲಿಂಗೈಕ್ಯ ವಿಭೂತಿಗಳನ್ನು ನಾನು ಹಲವುಸಲ ಕಂಡು ಮಂತ್ರಮುಗ್ಧನಾಗಿದ್ದೇನೆ. ಶ್ರೀಮಠದ ಚಟುವಟಿಕೆ ಇಂದಿಗೂ ಅದೇ ಹಾದಿಯಲ್ಲಿ ನಡೆದಿರುವುದು ಅಭಿಮಾನಾಸ್ಪದ."

ಶ್ರೀಯುತ ಎಸ್. ಆರ್. ಕಂಠಿಯುವರು ಮುಖ್ಯಮಂತ್ರಿಗಳಾಗಿದ್ದಾಗ ಶ್ರೀ ಮುರುಘಾಮಠಕ್ಕೆ ಭೆಟ್ಟಿ ನೀಡಿ ಹೀಗೆ ನುಡಿದಿದ್ದಾರೆ :
"ಶ್ರೀ ಶ್ರೀ ಮೃತ್ಯುಂಜಯಮಹಾಸ್ವಾಮಿಗಳ ದರ್ಶನ ಪಡೆದುಕೊಳ್ಳುವುದು ಜೀವನದ ಒಂದು ವಿಶೇಷ ಸಂದರ್ಭವೆಂದು ನಾನು ತಿಳಿದುಕೊಂಡಿದ್ದೇನೆ. ಶ್ರೀ ಮೃತ್ಯುಂಜಯಮಹಾಸ್ವಾಮಿಗಳು ಮಹಾಶಕ್ತಿಯ ಒಂದು ದೇದೀಪ್ಯಮಾನ ಸಂಕೇತವಾಗಿದ್ದಾರೆ. ಅವರು ನಮ್ಮ ನಾಡಿನ ಬಹುದೊಡ್ಡ ಆಧ್ಯಾತ್ಮಿಕ ಸಂಪತ್ತು. ಅವರ ನೇತೃತ್ವದಲ್ಲಿ ನಡೆಯುವ ಕಾರ್ಯಗಳನ್ನು ಕಂಡು ಅನೇಕರು ಉದ್ದೀಪನಗೊಂಡಿದ್ದಾರೆ. ಅಂಥವರಲ್ಲಿ ನಾನೂ ಒಬ್ಬ. ಶ್ರೀ ಮೃತ್ಯುಂಜಯಸ್ವಾಮಿಗಳು ಹಂಬಲಿಸುತ್ತಲಿರುವ ಸಕಲಜೀವಾತ್ಮರ ಲೇಸು ಬೇಗನೆ ನಿರ್ಮಾಣವಾಗಲೆಂದು ಪ್ರಾರ್ಥಿಸುತ್ತೇನೆ."

ಕರ್ನಾಟಕ ರಾಜ್ಯದ ಹಿಂದಿನ ಶಿಕ್ಷಣ ಮಂತ್ರಿಗಳಾಗಿದ್ದ ಕೆ. ವಿ. ಶಂಕರೇಗೌಡರ ಅಭಿಪ್ರಾಯಗಳಿವು : "ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ ಕೆಲಕಾಲ ಕುಳಿತು ಅವರ ಸರಳ, ಸುಂದರ ಉಪದೇಶ ಅಮೃತದಿಂದ ಪುಲಕಿತರಾಗಿ ಕೆಲಕಾಲ ಪ್ರಾಪಂಚಿಕ ಜಂಜಾಟದಿಂದ ದೂರಾಗಿ ಒಂದು ದಿವ್ಯಾನುಭವ ಪಡೆಯುವುದು ನಮ್ಮ ಸೌಭಾಗ್ಯವೆಂದು ಭಾವಿಸಿದ್ದೇನೆ. ಶ್ರೀ ಶ್ರೀ ಸ್ವಾಮಿಗಳ ಲೌಕಿಕಪ್ರೇಮ, ಸರಳತೆ, ಸರ್ವಧರ್ಮಸಮನ್ವಯ ಬುದ್ಧಿ, ಮಾನವಜನಾಂಗದ ಕಲ್ಯಾಣಕ್ಕಾಗಿ-ವಿದ್ಯಾರ್ಥಿಗಳ ಶ್ರೇಯೋಭಿವೃದ್ಧಿಗಾಗಿ ಅವರು ಸರಕಾರದ ಯಾವ ಸಹಾಯವನ್ನೂ ಅಪೇಕ್ಷಿಸದೆ ನಡೆಸುತ್ತಿರುವ ಕಾರ್ಯಚಟುವಟಿಕೆಗಳು ಆಕರ್ಷಣೀಯವೂ ಅನುಕರಣೀಯವೂ ಆಗಿವೆ. ಇಂಥ ಮಠಗಳು ದೇಶದ ಮೂಲೆ ಮೂಲೆಯಲ್ಲಿಯೂ ಹೆಚ್ಚುವಂತಾಗಲಿ."

"ಅವರವರ ದರುಶನಕೆ ಅವರವರ ಭಾವಕ್ಕೆ ಅವರವರಿಗೆಲ್ಲ ಗುರು ನೀನೊಬ್ಬನೇ" ಎಂಬಂತೆ ಅನೇಕರು ಈ ಶ್ರೀ ಗುರುವನ್ನು ಮುಕ್ತವಾಗಿ ಹೊಗಳಿದ್ದಾರೆ, ಭಕ್ತಿಯಿಂದ ಬಾಗಿದ್ದಾರೆ. ವೀರಶೈವ-ವೀರಶೈವೇತರ, ದೇಶ-ವಿದೇಶಗಳ ಜನತೆ ತೋರಿದ ಭಕ್ತಿ, ಶ್ರೀಗಳವರ ಲೋಕವಂದ್ಯವ್ಯಕ್ತಿತ್ವಕ್ಕೆ ನಿದರ್ಶನವೆನಿಸಿದೆ. ಇಂಥ ವಿಭೂತಿಪುರುಷರು ವೀರಶೈವರಾಗಿರುವುದು ನಮ್ಮೆಲ್ಲರ ಭಾಗ್ಯವಾಗಿದೆ.



# ವೀರಶೈವ ಪುಣ್ಯಪುರುಷ ಸಾಹಿತ್ಯರತ್ನಮಾಲೆಯ ಪ್ರಕಟನೆಗಳು

| ಪುಸ್ತಕದ ಹೆಸರು | ಲೇಖಕರು |
| --- | --- |
| ಡೆಪ್ಯೂಟಿ ಚೆನ್ನಬಸಪ್ಪನವರು | ಶ್ರೀ ಎಂ. ಜಿ. ಹಂದ್ರಾಳ |
| ಸಕ್ಕರಿ ಕರಡೆಪ್ಪನವರು | ಶ್ರೀ ಬಸವರಾಜ ಅಜ್ಜಂಪುರಶೆಟ್ರು |
| ಸಿರಸಂಗಿ ಲಿಂಗರಾಜರು | ಡಾ. ದೇವೇಂದ್ರಕುಮಾರ ಹಕಾರಿ |
| ಹರ್ಡೇಕರ ಮಂಜಪ್ಪನವರು | ಡಾ. ಸಿದ್ಧಯ್ಯ ಪುರಾಣಿಕ |
| ಎಚ್. ಎಫ್. ಕಟ್ಟೀಮನಿಯವರು | ಡಾ. ಎಸ್. ಆರ್. ಗುಂಜಾಳ |
| ಪಿ. ಆರ್. ಕರಿಬಸವಶಾಸ್ತ್ರಿಗಳು | ಪಂ. ಎಂ. ಜಿ. ನಂಜುಂಡಾರಾಧ್ಯ |
| ಬಸವಪ್ಪಶಾಸ್ತ್ರಿಗಳು | ಪ್ರೊ. ಸಿ. ಎಸ್. ಶಿವಕುಮಾರಸ್ವಾಮಿ |
| ಚಿಕ್ಕೋಡಿ ತಮ್ಮಣ್ಣಪ್ಪನವರು | ಡಾ. ಜೆ. ಎಸ್. ಕುಳ್ಳಿ |
| ಚೆನ್ನಮಲ್ಲಿಕಾರ್ಜುನರು | ಪಂ. ಚನ್ನಪ್ಪ ಯರೇಸೀಮೆ |
| ಬಸರಿಗಿಡದ ವೀರಪ್ಪನವರು | ಪ್ರಿ. ಶಾಂತರಸ |
| ಗುಬ್ಬಿ ತೋಟದಪ್ಪನವರು | ಪ್ರಿ. ಆರ್. ರಾಚಪ್ಪ |
| ದೊಡ್ಡಮೇಟಿ ಅಂದಾನಪ್ಪನವರು | ಶ್ರೀ ಜ್ಞಾನದೇವ ದೊಡ್ಡಮೇಟಿ |
| ಎಂ. ಬಸವಯ್ಯನವರು | ಪ್ರೊ. ಎಚ್. ದೇವೀರಪ್ಪ |
| ಚಿಕ್ಕೋಡಿ ಪಂಡಿತಪ್ಪನವರು | ಶ್ರೀ ದು. ನಿಂ ಬೆಳಗಲಿ |
| ಪಾವಟೆ ಸಿದ್ರಾಮಪ್ಪನವರು | ಡಾ. ಬಿ. ಸಿ. ಜವಳಿ |
| ಆರ್. ಎಸ್. ಪಾಟೀಲರು | ಪ್ರೊ. ವೀ. ಚ. ಹಿತ್ತಲಮನಿ |
| ವ್ಯಾಕರಣದ ಮಲ್ಲಪ್ಪನವರು | ಡಾ. ದೇ. ಜವರೇಗೌಡ |
| ಬ್ಯಾ. ಎಂ. ಎಸ್. ಸರದಾರರು | ಪ್ರೊ. ಚಂದ್ರಶೇಖರ ವಸ್ತ್ರದ |
| ಬಬಲೇಶ್ವರ ಶಾಂತವೀರಪಟ್ಟಾಧ್ಯಕ್ಷರು | ಶ್ರೀ ಸಿಂಪಿ ಲಿಂಗಣ್ಣ |
| ಅರಟಾಳ ರುದ್ರಗೌಡರು | ಪ್ರೊ. ಎಸ್. ಎಂ ಅಂಗಡಿ |
| ಎಂ. ಪಿ. ಪಾಟೀಲರು | ಶ್ರೀ ಪಾಟೀಲ ಮತ್ತು ಹುಕ್ಕೇರಿ |

| ಪುಸ್ತಕದ ಹೆಸರು | ಲೇಖಕರು |
| --- | --- |
| ವೈ. ಮಹಾಬಲೇಶ್ವರಪ್ಪನವರು | ಶ್ರೀ ಸಿ. ವ. ಚೆನ್ನಬಸವೇಶ್ವರ |
| ಯಜಮಾನ ವೀರಸಂಗಪ್ಪನವರು | ಡಾ. ಬಿ. ನಂ. ಚಂದ್ರಯ್ಯ |
| ನಲವಡಿ ಶ್ರೀಕಂಠಶಾಸ್ತ್ರಿಗಳು | ಡಾ. ಮೃತ್ಯುಂಜಯ ಹೊರಕೇರಿ |
| ದೇಶಮುದ್ರೆ ಮಲ್ಲಪ್ಪನವರು | ಶ್ರೀ ಹೀ. ಚಿ. ಶಾಂತವೀರಯ್ಯ |
| ಜಂಗಿನ ಮುರಗಯ್ಯನವರು | ಶ್ರೀ ಸುಲೋಚನಾದೇವಿ ಆರಾಧ್ಯ |
| ಹೊನ್ನಾಪುರಮಠ ಗದಿಗೆಯ್ಯನವರು | ಡಾ. ಬಿ. ಕೆ. ಹೊಸಮಠ |
| ಸರ್ ಕಂಬಳಿ ಸಿದ್ದಪ್ಪನವರು | ಶ್ರೀ ಪಾಟೀಲ ಪುಟ್ಟಪ್ಪ |
| ಶ್ರೇಷ್ಠಿ ವೀರಬಸಪ್ಪನವರು | ಶ್ರೀ ಮ. ಗು. ಘಿವಾರಿ |
| ನಾಗರಾಳ ದೊಡ್ಡಪ್ಪನವರು | ಪ್ರೊ. ಬಿ. ಎಂ. ಮಾಗಿ |
| ಜಿ. ಎಸ್. ದಂಡಾವತಿಮಠ | ಶ್ರೀ ವ್ಹಿ. ಸಿ. ಮಾಲಗತ್ತಿ |
| ವೈರಾಗ್ಯದ ಮಲ್ಲಣಾರ್ಯರು | ಪ್ರೊ. ಬಿ. ಕೆ. ಹಿರೇಮಠ |
| ಎಸ್. ಎಸ್. ಬಸವನಾಳರು | ಪ್ರೊ. ಬಿ. ವ್ಹಿ. ಗುಂಜೆಟ್ಟಿ |
| ಹಾಲಭಾವಿ ವೀರಭದ್ರಪ್ಪನವರು | ಡಾ. ವೀರಣ್ಣ ರಾಜೂರ |
| ಅಂಗಡಿ ದಂಪತಿಗಳು | ಡಾ. ಡಿ. ಎಸ್. ಕರ್ಕಿ |
| ಬಿ. ಬಿ. ಮಮದಾಪೂರ | ಶ್ರೀ ಬ ಗಂ. ತುರಮರಿ |
| ಧನಶೆಟ್ಟಿ ಮಲ್ಲಪ್ಪನವರು | ಶ್ರೀ ಅಪ್ಪಾರಾವ ಅಕ್ಕೋಣಿ |
| ಎಂ ಆರ್. ಸಾಖರೆಯವರು | ಡಾ. ಎಂ. ಎಸ್. ಸುಂಕಾಪುರ |
| ಪುರಾಣಿಕ ಬುದ್ಧಯ್ಯನವರು | ಡಾ. ಬಿ. ವ್ಹಿ. ಮಲ್ಲಾಪುರ |
| ನವಿಲುಗುಂದ ಗವಿಮಠದ ಶ್ರೀಗಳು | ಪ್ರೊ. ಸ. ಸ. ಮಾಳವಾಡ |
| ಕಂಬಿ ಸಿದ್ಧರಾಮಣ್ಣನವರು | ಶ್ರೀ ಹೀ. ಚಿ. ಶಾಂತವೀರಯ್ಯ |
| ಟಿ. ಎಚ್. ಎಂ. ಸದಾಶಿವಯ್ಯನವರು | ಡಾ. ಬಸವರಾಜ ಮಲಶೆಟ್ಟಿ |
| ಕಲಕಂಬ ಮಾಸ್ತರ | ಪ್ರೊ. ಜಯವಂತ ಕಾಡದೇವರ |
| ಗಿಲಗಂಚಿ ಗುರುಸಿದ್ದಪ್ಪನವರು | ಶ್ರೀ ಮ. ಈ. ಕಣಗಲಿ |
| ನಿಷ್ಠೆಯ ಕಡಲಪ್ಪ-ವೀರಪ್ಪನವರು | ಡಾ. ವ್ಹಿ. ಜಿ. ಪೂಜಾರ |
| ಶಿರೂರು ವೀರಭದ್ರಪ್ಪನವರು | ಡಾ. ಸೂರ್ಯನಾಥ ಕಾಮತ |
| ಡಿ. ಜಿ. ಬಡಿಗೇರ | ಶ್ರೀಮತಿ ಶೋಭಾ ಬಡಿಗೇರ |
| ಜಿ. ಎಂ. ಸಿದ್ಧರಾಮಣ್ಣನವರು | ಶ್ರೀ ಟಿ. ಆರ್. ಮಹಾದೇವಯ್ಯ |
| ಏಲೇರಿ ಅನ್ನಪೂರ್ಣಯ್ಯನವರು | ಶ್ರೀ ಬಿ. ಮಹಾದೇವಪ್ಪ |

| ಪುಸ್ತಕದ ಹೆಸರು | ಲೇಖಕರು |
|---|---|
| ದ್ಯಾಂಪುರ ಚೆನ್ನಕವಿಗಳು | ಶ್ರೀ ಪಂ. ನಾಗಭೂಷಣಶಾಸ್ತ್ರಿಗಳು |
| ಹೊಸಮನಿ ಸಿದ್ದಪ್ಪನವರು | ಶ್ರೀ ಪಾಟೀಲ ಪುಟ್ಟಪ್ಪ |
| ಸುಗಂಧಿ ಮುರಿಗೆಪ್ಪನವರು | ಶ್ರೀ ಈಶ್ವರಚಂದ್ರ ಚಿಂತಾಮಣಿ |
| ಸಿ. ಸಿ. ಹುಲಕೋಟಿಯವರು | ಶ್ರೀ ಎನ್ಕೆ |
| ಸದಾಶಿವ ಶಿವಾಚಾರ್ಯರು | ಶ್ರೀ ಗೊ. ರು. ಚನ್ನಬಸಪ್ಪ |
| ಈಶ್ವರ ಸಣಕಲ್ಲ | ಶ್ರೀ ದು. ನಿಂ. ಬೆಳಗಲಿ |
| ಗೌರೀಶಂಕರ ಸ್ವಾಮಿಗಳು | ಶ್ರೀ ಎಚ್. ಗಂಗಾಧರನ್ |
| ಮುರಗೋಡ ಫಕೀರಪ್ಪನವರು | ಪ್ರೊ. ಸಿದ್ದಣ್ಣ ಲಂಗೋಟಿ |
| ನೀಲಕಂಠ ಬುವಾ | ಡಾ. ದೇವೇಂದ್ರಕುಮಾರ ಹಕಾರಿ |
| ಬಿ. ಎಸ್. ಹಂಚಿನಾಳ | ಪ್ರೊ. ಗಂಗಾಧರ ಕಲಬುರ್ಗಿ |
| ಅಕ್ಕಲಕೋಟೆಯ ರೇವಣಸಿದ್ಧ ಶರಣರು | ಶ್ರೀ ರಾಮಲಿಂಗಸ್ವಾಮಿಗಳು |
| ಅರಗಾವಿ ಬಸಪ್ಪನವರು | ಪ್ರೊ. ಎನ್. ಎಫ್. ಮೋಟಿ |
| ಗುರುಬಸವಾರ್ಯಮಠ ಮಾಸ್ತರರು | ಶ್ರೀ ವೀರಬಸವ ಬಲಕುಂದಿ |
| ಕಿತ್ತೂರ ಅಡಿವೆಪ್ಪನವರು | ಶ್ರೀ ಸುರೇಶ ಬಡಿಗೇರ |
| ಘನಮಠದಾರ್ಯರು | ಶ್ರೀ ಎಸ್. ಎಸ್. ಕಟಗಿಹಳ್ಳಿಮಠ |
| ಅಣ್ಣಾರಾಯ ಗಣಮುಖಿ | ಶ್ರೀ ಬ. ವ್ಹಿ. ಹಂಪನಗೌಡರ |
| ಸಿದ್ಧೇಶ್ವರ ಜಗದ್ಗುರುಗಳು | ಶ್ರೀ ಸಿದ್ದಲಿಂಗಯ್ಯ ಹೊಸಮಠ |
| ಬಿ. ಎಸ್. ಜೀರಿಗೆಯವರು | ಡಾ. ಎಸ್. ಜೆ. ನಾಗಲೋಟಿಮಠ |
| ಉದಗೀರ ಸಂಗ್ರಾಮಪ್ಪನವರು | ಪ್ರೊ. ಜಿ. ಬಿ. ವಿಸಾಜಿ |
| ಹಂಸಭಾವಿ ಇಟಗಿ ವಕೀಲರು | ಪ್ರೊ. ಭೋಜರಾಜ ಪಾಟೀಲ |
| ಪತ್ರಿ ಚನವೀರಯ್ಯನವರು | ಶ್ರೀಮತಿ ಲಲಿತಾಂಬ ವೃಷಭೇಂದ್ರಸ್ವಾಮಿ |
| ಅಂಬಲಿ ಚನ್ನಬಸಪ್ಪನವರು | ಪ್ರಿ. ಚ. ವಿ. ಮುಳಗುಂದ |
| ಗಂಗಾಧರಮಡಿವಾಳೇಶ್ವರ ತುರಮರಿ | ಶ್ರೀ ಎನ್ಕೆ |
| ಎಲೆಮಲ್ಲಪ್ಪಶೆಟ್ಟರು | ಶ್ರೀಮತಿ ಜಯರಾಜಶೇಖರ |
| ಜಯದೇವಿತಾಯಿ ಲಿಗಾಡೆ | ಡಾ. ಸರೋಜನಿ ಚವಲಾರ |
| ಎಸ್. ಆರ್. ಕಂಠಿಯವರು | ಶ್ರೀ ಶಂಭು ಬಳಿಗಾರ |
| ಮೃತ್ಯುಂಜಯ ಅಪ್ಪಗಳು | ಡಾ. ಆರ್. ಸಿ. ಹಿರೇಮಠ |

## ವೀರಶೈವ ಅಧ್ಯಯನಸಂಸ್ಥೆ

ಗದುಗಿನ ಶ್ರೀ ತೋಂಟದಾರ್ಯಮಠದ 'ವೀರಶೈವ ಅಧ್ಯಯನಸಂಸ್ಥೆ' ಆಧುನಿಕ ವೀರಶೈವ ಜಗತ್ತಿನ ಒಂದು ದೀಪ, ಒಂದು ದ್ವೀಪ. ಪವಿತ್ರಸಂಕಲ್ಪ, ಪ್ರಾಮಾಣಿಕ ದುಡಿಮೆಗಳಿಂದ ಎಂಥ ದೊಡ್ಡ ಕೆಲಸವನ್ನೂ ಎಷ್ಟು ಸುಲಭವಾಗಿ ಮಾಡಬಹುದೆಂಬುದಕ್ಕೆ ಈ ಸಂಸ್ಥೆಯ ಪ್ರಕಟನೆಗಳು ಸಾಕ್ಷಿಯಾಗಿವೆ. ಹತ್ತು ವರ್ಷದ ಅಲ್ಪಾವಧಿಯಲ್ಲಿ ವೀರಶೈವ ಪುಣ್ಯಪುರುಷ ಮಾಲೆಯ ನೂರು ಪುಸ್ತಕ, ವೀರಶೈವ ಅಪ್ರಕಟಿತ ಗ್ರಂಥಮಾಲೆಯ ಇಪ್ಪತ್ತು ಪುಸ್ತಕಗಳನ್ನು ಈ ಸಂಸ್ಥೆ ಪ್ರಕಟಿಸಿದುದು, ಕರ್ನಾಟಕದ ಇತ್ತೀಚಿನ ಗ್ರಂಥಪ್ರಕಟನೆಯ ಇತಿಹಾಸದಲ್ಲಿಯೇ ಒಂದು ಉಜ್ವಲ ದಾಖಲೆ. ಪುಣ್ಯಪುರುಷ ಮಾಲೆಯ ಪುಸ್ತಕಗಳಂತೂ ಕತ್ತಲೆಯಿಂದ ತುಂಬಿದ ಒಂದು ಶತಮಾನದ ವೀರಶೈವ ಇತಿಹಾಸದಲ್ಲಿ ಹಚ್ಚಿಯಿಟ್ಟ ಪುಟ್ಟ ಪುಟ್ಟ ದೀವಿಗೆಗಳು. ವೀರಶೈವ ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ ಸೇವೆಯನ್ನು ತಟ್ಟನೆ ತೋರಿಸಿ ಕೊಡುವ ಅಂಗೈ ಅಗಲದ ಕನ್ನಡಿಗಳು. **"ಈ ಮಾಲೆ ಈ ಶತಮಾನದ ಒಂದು ವೀರಶೈವ ದೊಡ್ಡ ಕೆಲಸ"** ವೆಂದು ಈಗಾಗಲೇ ವಿದ್ವಾಂಸರು ಗುರುತಿಸಿದುದು ಒಂದು ವಿಶೇಷ.

ಇವತ್ತಿನ ವರೆಗೆ ಈ ಸಂಸ್ಥೆ ಪ್ರಕಟಿಸಿದ ಒಟ್ಟು ಸಾಹಿತ್ಯ ಇಪ್ಪತ್ತು ಸಾವಿರ ಪುಟ. ಓದುಗರ ಕೈಸೇರಿದ ಪ್ರತಿಗಳ ಸಂಖ್ಯೆ ಎರಡೂವರೆ ಲಕ್ಷ. ವ್ಯಯಿಸಿದ ಒಟ್ಟು ಹಣ ಐದು ಲಕ್ಷ ರೂಪಾಯಿ. ಈಗ ಹನ್ನೆರಡು ಲಕ್ಷ ರೂಪಾಯಿಗಳನ್ನು ವಿನಿಯೋಗಿಸಿ ಐದುನೂರು ಪುಟಗಳಿಗೆ ಒಂದರಂತೆ ಹನ್ನೆರಡು ಸಂಪುಟಗಳಲ್ಲಿ ಒಟ್ಟು ಆರುಸಾವಿರ ಪುಟಗಳ 'ವೀರಶೈವ ವಿಶ್ವಕೋಶ' ಸಿದ್ಧಪಡಿಸುವ ಕಾರ್ಯವನ್ನು ಕೈಗೆತ್ತಿಕೊಂಡಿದೆ. ಪೂಜ್ಯ ಶ್ರೀ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು 'ಜಗದ್ಗುರು ಪೀಠ'ಕ್ಕೆ ಅಧಿಪತಿಗಳಾಗಿ ಬಂದು ಹನ್ನೆರಡು ವರ್ಷ ತುಂಬಿದ ನೆನಪಿಗಾಗಿ, ಹನ್ನೆರಡು ಸಂಪುಟಗಳು ರೂಪಗೊಳ್ಳುತ್ತಲಿವೆ.

---

ವೀರಶೈವ ಅಧ್ಯಯನಸಂಸ್ಥೆ
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ
ಡಂಬಳ – ಗದಗ